# ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳು

(ಸುರಪುರ ತಾಲ್ಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕ
ಈರಪ್ಪ ಅಂಬ್ಲಯ್ಯ

ಮಾರ್ಗದರ್ಶಕರು
ಡಾ. ಎ.ಎಸ್.ಪ್ರಭಾಕರ
ಪ್ರವಾಚಕರು



ಸಮಾಜವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬



೨೦೦೮-೦೯

# ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳು

(ಸುರಪುರ ತಾಲ್ಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕ
ಈರಪ್ಪ ಅಂಬ್ಲಯ್ಯ

ಮಾರ್ಗದರ್ಶಕರು
ಡಾ. ಎ.ಎಸ್.ಪ್ರಭಾಕರ
ಪ್ರವಾಚಕರು





ಸಮಾಜವಿಜ್ಞಾನಗಳ ನಿಕಾಯ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೮-೦೯

## ಮಾರ್ಗದರ್ಶಕರ ದೃಢೀಕರಣ ಪತ್ರ

"ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟು ಸಮಾಜೋ-ಆರ್ಥಿಕ ಸ್ಥಿತಿಗತಿಗಳು" (ಸುರಪುರ ತಾಲ್ಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ) ಎಂಬ ಸಂಪ್ರಬಂಧವು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಈರಪ್ಪ ಅಂಬ್ಲಯ್ಯ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಡಾ. ಎ.ಎಸ್.ಪ್ರಭಾಕರ)
ಪ್ರವಾಚಕರು ಮತ್ತು ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 15/10/09
ಸ್ಥಳ : ವಿದ್ಯಾರಣ್ಯ.

# ಸಂಶೋಧಕರ ಪ್ರಮಾಣ ಪತ್ರ

"ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟು ಸಮಾಜೋ-ಆರ್ಥಿಕ ಸ್ಥಿತಿಗತಿಗಳು" (ಸುರಪುರ ತಾಲ್ಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳನ್ನು ಪರಿಗಣಿಸಿ) ಎಂಬ ಸಂಪ್ರಬಂಧವನ್ನು ಡಾ.ಎ.ಎಸ್.ಪ್ರಭಾಕರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ಈರಪ್ಪ ಅಂಬ್ಲಯ್ಯ)
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ: 15/10/09
ಸ್ಥಳ : ವಿದ್ಯಾರಣ್ಯ.

# ಪರಿವಿಡಿ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

## ಪ್ರಸ್ತಾವನೆ

ಇಪ್ಪತ್ತನೇ ಶತಮಾನದ ಆರಂಭದವರೆಗೂ ಭಾರತವನ್ನು ಸಂಪ್ರದಾಯನಿಷ್ಠ, ಜಡತ್ವದ ಮತ್ತು ಪ್ರತಿಗಾಮಿ ಸಮಾಜವೆಂದು ಪರಿಗಣಿಸುತ್ತಿದ್ದ ಕಾಲವಾಗಿತ್ತು. ಭಾರತವನ್ನು ಸುಮಾರು ೧೫೦ ವರ್ಷಗಳವರೆಗೆ ಆಳಿದ ಬ್ರಿಟೀಷ್ ಸರ್ಕಾರವು ಭಾರತದಲ್ಲಿ ಕೈಗಾರಿಕೋದ್ಯಮವನ್ನು ಆರಂಭಿಸುವ ಪ್ರಯತ್ನ ಮಾಡುವುದರ ಜೊತೆಗೆ ಸಾಮಾಜಿಕ ಆರ್ಥಿಕ ಪರಿವರ್ತನೆಗಳನ್ನು ಹುಟ್ಟು ಹಾಕುವ ಯತ್ನದ ಮೂಲಕ ಈ ಪರಿಗಣನೆಯನ್ನು ದೂರ ಮಾಡಿತು. ಆದರೆ ಇಂತಹ ಪರಿವರ್ತನೆಗಳಿಂದ ಭಾರತೀಯರ ಜೀವನದ ಗುಣಮಟ್ಟವನ್ನು ಹೆಚ್ಚಿಸುವ ಯಾವುದೇ ಉದ್ದೇಶವನ್ನು ಬ್ರಿಟಿಷರು ಹೊಂದಿರಲಿಲ್ಲ. ಪರ್ಯಾಯವಾಗಿ, ಭಾರತದಲ್ಲಿ ಸ್ಥಾಪನೆಗೊಂಡಿದ್ದ ರಾಜಕೀಯ ಆಳ್ವಿಕೆಯನ್ನು ಸ್ಥಿರಗೊಳಿಸುವ ಉದ್ದೇಶ ಅವರದಾಗಿತ್ತು. ಇವರ ಉದ್ದೇಶ ಯಾವುದಾದರೂ ಕೂಡ ಭಾರತದ ಕುಟುಂಬ ವ್ಯವಸ್ಥೆ, ವಿವಾಹ, ಬಂಧುತ್ವ, ಅಸ್ಪೃಶ್ಯತೆ, ಗ್ರಾಮೀಣ ಜೀವನ, ಸಾಮಾಜಿಕ ಸ್ತರ ವ್ಯವಸ್ಥೆಗಳಲ್ಲಿ ಬದಲಾವಣೆಯಾಗಿರುವುದು ಕಂಡುಬರುತ್ತದೆ.

ದ್ವಿತೀಯ ಜಾಗತೀಕ ಮಹಾಯುದ್ದದ ಪರಿಣಾಮ ವಿಶ್ವಸಂಸ್ಥೆಯ ಸ್ಥಾಪನೆಯಾಗಿ ತೃತೀಯ ಜಗತ್ತಿನ ದೇಶಗಳಲ್ಲಿ ಅಂದರೆ ವಸಾಹತುಶಾಹಿ ಸಾಮ್ರಾಜ್ಯಗಳು ಪತನಗೊಂಡ ಬಳಿಕ ಸ್ವತಂತ್ರಗೊಂಡು ಅಭಿವೃದ್ಧಿ ಪಥದಲ್ಲಿ ಮುನ್ನಡೆದಿದ್ದ ಕೆಲವು ದೇಶಗಳಲ್ಲಿ ಸಾಮಾಜಿಕ ಆರ್ಥಿಕ ಪರಿವರ್ತನೆಗಳಾದವು. International Monitary Fund (IMF), World Bank (WB) Asian Devolopment Bank (ADB) ಇತ್ಯಾದಿಯಂತಹ ಸಂಸ್ಥೆಗಳು ಒದಗಿಸುವ ಅಪಾರ ಸೇವಾ ಸೌಲಭ್ಯಗಳು, ಹಣಕಾಸಿನ ಸೌಲಭ್ಯಗಳು ಇಂತಹ ಪರಿವರ್ತನೆಗಳಿಗೆ ಕಾರಣವಾಗಿವೆ. ಅಲ್ಲದೆ ಇಂತಹ ಅಂತರ್‌ರಾಷ್ಟ್ರೀಯ ಹಣಕಾಸು ಸಂಸ್ಥೆಗಳು ವಿಶ್ವಮಟ್ಟದ ಉತ್ಪಾದನೆ ಮತ್ತು ವಿತರಣೆಗೆ ನೆರವಾಗುತ್ತಿವೆ. ಇದರಿಂದ ಸಾಮಾಜಿಕ, ಆರ್ಥಿಕ ಪರಿವರ್ತನೆಗಳು ಉಂಟಾದವು.

ಈ ಮೇಲಿನ ಅಂಶಗಳಿಂದ ಜಾಗತೀಕರಣ ಪ್ರಕ್ರಿಯೆಯ ಬೇರು ಕೈಗಾರಿಕಾ ಕ್ರಾಂತಿಯಲ್ಲಿ ಚಾಚಿಕೊಂಡು ವಿಶ್ವಸಂಸ್ಥೆಯ ಸ್ಥಾಪನೆಯ ಮೂಲಕ ಉದಯವಾದಾಗ್ಯೂ ೧೯೮೦ರ ದಶಕದಲ್ಲಿ ಪ್ರಚಾರಕ್ಕೆ ಬಂದ ಪ್ರಕ್ರಿಯೆಗಳಲ್ಲಿ (ಪರಿಕಲ್ಪನೆಗಳಲ್ಲಿ) ಜಾಗತೀಕರಣವು ಒಂದಾಗಿದೆ. ಇದರ ಬಿಸಿ ಭಾರತವನ್ನು ಹೊರತುಪಡಿಸಿರಲಿಲ್ಲ. ಭಾರತವು ೧೯೯೦ರಲ್ಲಿ GATT ಒಪ್ಪಂದಕ್ಕೆ ರುಜುಹಾಕುವುದರ ಮೂಲಕ ಜಾಗತೀಕರಣ ಪ್ರಕ್ರಿಯೆಯ ಪ್ರಭಾವಕ್ಕೆ ಅಧಿಕೃತವಾಗಿ ಒಳಗಾಯಿತು.

ಅಮೇರಿಕಾದ ಸಮಾಜ ವಿಜ್ಞಾನಿ ಮಾರ್ಷಲ್ ಮ್ಯೋಹೊನ್ 1960 ರಲ್ಲಿ Exploration in Communication ಎಂಬ ತನ್ನ ಗ್ರಂಥದಲ್ಲಿ ಮೊದಲು ಬಾರಿಗೆ 'Global Village' ಎಂಬ ಪದವನ್ನು ಬಳಸಿ ವಿವರಿಸಿದರು. ಮಾಹಿತಿ ತಂತ್ರಜ್ಞಾನದ ವೇಗ ಮತ್ತು ಅದರ ಸಂಪರ್ಕ ಶಕ್ತಿಯ ಹಿನ್ನೆಲೆಯಲ್ಲಿ ಜಗತ್ತಿನ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಹೇಗೆಲ್ಲ ಸಮೀಪ ಸಾಧ್ಯವಾಗುತ್ತದೆ ಎಂಬ ಹಿನ್ನೆಲೆಯಲ್ಲಿ ಚರ್ಚಿಸಿದ. ಇವರು ಮುಖ್ಯವಾಗಿ ಇಡೀ ಜಗತ್ತೆ ಒಂದು 'ವಿಶಾಲವಾದ ಹಳ್ಳಿ' ಎಂದು ಕರೆಯುವ ಮೂಲಕ ಜಗತ್ತಿನ ಎಲ್ಲಾ ಮಾನವ ಸಂಪರ್ಕಗಳು ಅರ್ಥಪೂರ್ಣವಾಗಿ ವಿಕಾಸವಾಗುವುದರ ಅಗತ್ಯವನ್ನು ಪ್ರತಿಪಾದಿಸಿದರು.

ತಂತ್ರಜ್ಞಾನದ ಬಳಿಕೆ ಅದರಲ್ಲಾದ ಕ್ರಾಂತಿಕಾರಿ ಬೆಳವಣಿಗೆ ಇವತ್ತು ಜಗತ್ತಿನ ಯಾವೊಂದು ಮೂಲೆಯನ್ನು ಒಂದೇ ಕ್ಷಣದಲ್ಲಿ ಸಂಪರ್ಕಿಸಬಲ್ಲದು. ಇದರಿಂದ ವಿಶ್ವವು ದಿನದಿಂದ ದಿನಕ್ಕೆ ಕಿರಿದಾಗುತ್ತಿದೆ.

ಆಕ್ಸಫರ್ಡ್ ಯೂನಿವರ್ಸಿಟಿಯ ಅರ್ಥಕೋಶದ ಪ್ರಕಾರ 'Global' ಪದಕ್ಕೆ ಸದೃಢತೆ, ಬಲಿಷ್ಠತೆ, ವಿಶ್ವಪ್ರಜ್ಞೆ, ಹೊಸತನ, ಸಮಷ್ಟಿ ಹಾಗೂ ಎಲ್ಲವು ಒಂದೇ ಎಂಬ ಅರ್ಥಗಳಿವೆ. ಅಮೇರಿಕಾದ ಹೊಸಯುಗದ ಅರುಣೋದಯದ ಚರಿತ್ರೆಯ ಹಿನ್ನೆಲೆಯಲ್ಲೇ ಗ್ಲೋಬಲ್ ಪದಕ್ಕೆ ಇಂತಹ ಅರ್ಥಗಳು ಸಾಧ್ಯವಾಗಿವೆ.

ಜಾಗತೀಕರಣವು ವಿಶ್ವ ಸಮಾಜಗಳನ್ನು ಕೂಡಿಸುವ ಒಂದು ಪ್ರಕ್ರಿಯೆಯಾಗಿರುವುದು. ಇದರಿಂದಾಗಿಯೇ ಜಾಗತೀಕ ಸಮಾಜ ವಿಜ್ಞಾನ 'Global Sociolaogy' ಎಂಬ ಪ್ರತ್ಯೇಕವೂ ಇಂದು ನಡೆಯುತ್ತಿದ್ದು ೧೯೬೬ ರಲ್ಲೆ 'Global Sociolaogy'ಎಂಬ ಪುಸ್ತಕವೂ ಬಂದಿತ್ತು.

ಜಾಗತೀಕರಣ ಎಂದರೆ, ವಿಶ್ವ ಆರ್ಥಿಕ ಸಂಬಂಧಗಳು ವಿಶ್ವ ರಾಜಕೀಯ ಸಂಪರ್ಕದಿಂದ ಜಗತ್ತನ್ನು ಒಂದು 'ವಿಶಾಲವಾದ ಹಳ್ಳಿ' ಯಂತೆ ಮಾಡುವುದೇ ಆಗಿದೆ. ಹೀಗಾಗಿಯೇ 'Global Politics, Global Market, Global Science, Global Conciousness, Global Power, Global equality ಎಂಬ ಅನೇಕ ಪರಿಕಲ್ಪನೆಗಳು ಹುಟ್ಟಿಕೊಂಡಿವೆ.

ಜಾಗತೀಕರಣವೆಂಬುದು ಪ್ರಕ್ರಿಯೆಯಾಗಿದ್ದರ ಪರಿಣಾಮವಾಗಿ ಸಮಾಜಗಳಲ್ಲಿನ ಜನರ ಜೀವನದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಇತ್ಯಾದಿ ಕ್ಷೇತ್ರಗಳು ಅಂತರ್‌ರಾಷ್ಟ್ರೀಯ ಪ್ರಭಾವಕ್ಕೆ ಒಳಗಾಗುವುದಾಗಿದೆ. ಈ ಎಲ್ಲಾ ಅಂಶಗಳು ಅಂತರ್‌ರಾಷ್ಟ್ರೀಯ ಪ್ರಭಾವಕ್ಕೆ ಒಳಗಾಗುವುದರ ಪರಿಣಾಮ ತೃತೀಯ ಜಗತ್ತಿನ ದೇಶಗಳ ತಳಸಮುದಾಯಗಳ ಮೇಲೆ ಆಗಿದೆ.

ಇಂತಹ ಸಮುದಾಯಗಳಲ್ಲಿ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ ಬುಡಕಟ್ಟುಗಳು ಜಾಗತೀಕರಣದ ಪ್ರಭಾವದಿಂದ ಹೊರತಾಗಿಲ್ಲ. ಬುಡಕಟ್ಟು ಸಮುದಾಯಗಳು ವಿಕಾಸದ ವಿವಿಧ ಹಂತಗಳಾದ ಆಹಾರ ಸಂಗ್ರಹಣೆಯ, ಬೇಟೆಗಾರಿಕೆಯ, ಪಶುಸಂಗೋಪನೆಯ, ವ್ಯವಸಾಯದ ಹಂತಗಳನ್ನು ದಾಟಿ ಬರುವುದರ ಜೊತೆಗೆ ಸಮುದಾಯದ ಒಳಗಡೆಯ ವಿಶಿಷ್ಟವಾದ ಸಂಸ್ಕೃತಿ, ವಿಶಿಷ್ಟವಾದ ಆರ್ಥಿಕತೆಯನ್ನು ಕಾಪಾಡುತ್ತಾ ಬಂದಾಗ್ಯೂ ವಿಕಾಸದ ಇನ್ನೂ ಎರಡು ಹಂತಗಳಾದ ಕೈಗಾರಿಕಾಹಂತ ಹಾಗೂ ವ್ಯಾಪಾರ ವಾಣಿಜ್ಯದ ಹಂತವನ್ನು ಕಂಡಿವೆ. ಆದ್ದರಿಂದ ಕೈಗಾರಿಕೆ ಹಾಗೂ ವ್ಯಾಪಾರ ವಾಣಿಜ್ಯದ ಹಂತದಲ್ಲಿ ಜಾಗತೀಕರಣವು ಈ ಸಮುದಾಯಗಳ ಮೇಲೆ ಯಾವ ಬಗೆಯ ಪ್ರಭಾವ ಬೀರಿದೆ ಎಂದು ಕಂಡುಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನವು ಜಾಗತೀಕರಣ ಸಂದರ್ಭದಲ್ಲಿ ಬೇಡ ಮತ್ತು ಮೇದ ಬುಡಕಟ್ಟುಗಳ ಸಮಾಜೋ ಆರ್ಥಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳುವ ಪ್ರಯತ್ನವಾಗಿರುವುದರಿಂದ ಬೇಡ ಮತ್ತು ಮೇದ ಬುಡಕಟ್ಟುಗಳ ಚಾರಿತ್ರಿಕ ಹಿನ್ನೆಲೆ ಎಂತಹದು? ವರ್ತಮಾನದಲ್ಲಿ ಈ ಬುಡಕಟ್ಟುಗಳು ಯಾವ ಬಗೆಯ ಸಾಮಾಜಿಕ ಆರ್ಥಿಕ ಸ್ಥಾನ ಮಾನಗಳನ್ನು ಹೊಂದಿದ್ದಾರೆ.? ಅವರ ಬದುಕಿನ ಬದಲಾವಣೆಗೆ ಜಾಗತೀಕರಣವು ಎಷ್ಟರ ಮಟ್ಟಿಗೆ ಕಾರಣವಾಗಿದೆ.? ಈ ಸಮುದಾಯಗಳ ವರ್ತಮಾನದ ಬದುಕು ಯಾವ ಬಗೆಯ ಬಿಕ್ಕಟ್ಟುಗಳಿಗೆ ಮುಖಾ ಮುಖಿಯಾಗುತ್ತಿದೆ? ಎಂಬ ಇತ್ಯಾದಿ ಅಂಶಗಳ ಆಧಾರದ ಮೇಲೆ ವಿಶ್ಲೇಷಣಾತ್ಮಕ ಅಧ್ಯಯನ ಮಾಡುವುದು ಅಧ್ಯಯನದ ಪ್ರಮುಖ ಧ್ಯೇಯವಾಗಿದೆ.

**ಅಧ್ಯಯನದ ಉದ್ದೇಶಗಳು**

೦೧. ಚಾರಿತ್ರಿಕವಾಗಿ ಬೇಡ ಮತ್ತು ಮೇದ ಬುಡಕಟ್ಟುಗಳ ಸಮಾಜೋ ಆರ್ಥಿಕ ಬದುಕಿನ ಸಮಗ್ರ ವಿವರಗಳನ್ನು ಸಂಗ್ರಹಿಸಿ ಜಾಗತೀಕರಣ ಸಂದರ್ಭದಲ್ಲಿ ಇವರ ಸ್ಥಿತಿಗತಿಯನ್ನು ವಿಶ್ಲೇಷಿಸುವುದು.

೦೨. ಬೇಡ ಮತ್ತು ಮೇದ ಬುಡಕಟ್ಟುಗಳ ಜಾಗತೀಕರಣ ಸಂದರ್ಭದಲ್ಲಿಯ ಸಂಸ್ಕೃತಿ, ಪದ್ಧತಿ, ಪರಂಪರೆ ಹಾಗೂ ಆಚರಣೆಗಳನ್ನು ಕುರಿತು ಅಧ್ಯಯನ ಮಾಡುವುದು.

೦೩. ಪ್ರಸ್ತುತ ಅಧ್ಯಯನದಲ್ಲಿ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳ ಸಮಾಜೋ ಆರ್ಥಿಕ ವ್ಯವಸ್ಥೆಯನ್ನು ಆಳವಾಗಿ ಶೋಧನೆಗೆ ಒಳಪಡಿಸುವುದು.

**ಅಧ್ಯಯನದ ವ್ಯಾಪ್ತಿ :**

ಅಧ್ಯಯನದ ವ್ಯಾಪ್ತಿಯು ಭೌಗೋಳಿಕವಾಗಿ ಕರ್ನಾಟಕ ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕನ್ನು ಆಯ್ಕೆ ಮಾಡಿಕೊಂಡಿದ್ದು, ಅದರಲ್ಲಿ ನನ್ನ ನಮೂನೆ ಅಧ್ಯಯನಕ್ಕಾಗಿ ಸುರಪುರ, ಕೆಂಭಾವಿ, ಹುಣಸಗಿ, ಕೊಡೇಕಲ್, ಕಕ್ಕೇರಿ ಎಂಬ ಊರುಗಳು ಆಯ್ದುಕೊಳ್ಳಲಾಗಿದೆ. ಈ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಅಧ್ಯಯನದ ಪ್ರಮೇಯ**

೧. ಬೇಡ ಮತ್ತು ಮೇದ ಸಮುದಾಯಗಳ ಬದುಕಿನಲ್ಲಿ ಸಂಭವಿಸಿರುವ ಬದಲಾವಣೆಗಳಿಗೆ ಈ ದೇಶದ ರಾಜಕೀಯ ಆರ್ಥಿಕ ಶಕ್ತಿಗಳು ಕಾರಣವಾಗಿವೆ.

೨. ಭಾರತದ ಸಾಮಾಜಿಕ ಸ್ತರ ವ್ಯವಸ್ಥೆಗೆ ಒಳಗಾದ ಬೇಡ ಮತ್ತು ಮೇದ ಬುಡಕಟ್ಟುಗಳು ಸಹಜವಾಗಿ ಒಂದು ಜಾತಿಯಾಗಿ ಮಾರ್ಪಟ್ಟು ಸಾಮಾಜೋ ಆರ್ಥಿಕ ಹಿನ್ನೆಡೆಯನ್ನು ಅನುಭವಿಸುತ್ತಿದ್ದಾರೆ.

೩. ಸಾಮಾಜಿಕ ಆರ್ಥಿಕ ಹಿನ್ನೆಡೆಯಿಂದ ಸಾಮಾಜಿಕ ಮತ್ತು ಸಾಂಸ್ಕೃತಿಕ ಕೀಳರಿಮೆಗಳು ಸಹಜವಾಗಿಯೇ ಈ ಸಮುದಾಯಗಳಿಗೆ ಪ್ರಾಪ್ತವಾಗಿವೆ.

೪. ಪ್ರಸ್ತುತ ಸಾಮಾಜಿಕ ಆರ್ಥಿಕ ಹಿನ್ನೆಡೆಗೆ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣಗಳಂತಹ ಪ್ರಕ್ರಿಯೆಗಳು ಕಾರಣವಾಗಿವೆ.

**ಅಧ್ಯಯನದ ವಿಧಾನಗಳು**

ಪ್ರಸ್ತುತ ಅಧ್ಯಯನಕ್ಕಾಗಿ ಬೇಡ ಮತ್ತು ಮೇದ ಸಮುದಾಯದ ವ್ಯಾಪ್ತಿಗೆ ಅನುಗುಣವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವಲ್ಲಿ ಹಲವಾರು ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳಲಾಗುವುದು. ಅಗತ್ಯವಿದ್ದಲ್ಲಿ ಗ್ರಂಥಗಳನ್ನು, ಲೇಖನಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

**೧. ಪ್ರಶ್ನಾವಳಿ ವಿಧಾನ**

ಸಮಾಜೋ ಆರ್ಥಿಕ ಸ್ಥಿತಿಗತಿಗೆ ಸಂಬಂಧಿಸಿದ ಅಧ್ಯಯನವಾಗಿರುವುದರಿಂದ ಬೇಡ

ಮತ್ತು ಮೇದ ಬುಡಕಟ್ಟು ಸಮುದಾಯದ ಸದಸ್ಯರು ಮತ್ತು ಈ ಸಮುದಾಯಗಳ ಬಗ್ಗೆ ತಿಳಿದಿರುವ ಇತರರಿಂದ ಮಾಹಿತಿ ಪಡೆಯಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೨. ಸಂದರ್ಶನ ವಿಧಾನ**

ಈ ಸಮುದಾಯಗಳ ಸಮಾಜೋ ಆರ್ಥಿಕ ಸ್ಥಿತಿಗತಿಯ ಬಗ್ಗೆ ಮಾಹಿತಿ ಸಂಗ್ರಹಿಸಲು ಈ ಸಮುದಾಯಗಳ ಸದಸ್ಯರನ್ನು ಸಂದರ್ಶಿಸಲಾಗಿದೆ.

**೩. ಅವಲೋಕನ ವಿಧಾನ**

ಜಾಗತೀಕರಣದ ಪ್ರಭಾವಕ್ಕೆ ಒಳಗಾಗಿದ್ದಾರೆಯೇ? ಇಲ್ಲವೋ? ಜಾಗತೀಕರಣ ಸಂದರ್ಭದಲ್ಲಿ ಇವರು ಯಾವ ಬಗೆಯ ಸ್ಥಿತಿಗತಿಯನ್ನು ಹೊಂದಿದ್ದಾರೆ? ಎಂಬ ಮನೋಪ್ರಶ್ನೆಗಳ ಮೂಲಕ ಮಾಹಿತಿ ಸಂಗ್ರಹಿಸಲು ಕ್ಷೇತ್ರಕಾರ್ಯದಲ್ಲಿ ಸಹಭಾಗಿತ್ವ ಹಾಗೂ ಅಸಹಭಾಗಿತ್ವ ಎಂಬ ಅವಲೋಕನದ ವಿಧಾನಗಳನ್ನು ಬಳಸಿಕೊಳ್ಳಲಾಗಿದೆ.

**೪. ಚಾರಿತ್ರಿಕ ವಿಧಾನ**

ಪ್ರಸಕ್ತ ಸಾಮಾಜಿಕ ಜೀವನದ ವಿವಿಧ ರೂಪಗಳಾದ ರೂಢಿ, ಸಂಪ್ರದಾಯಗಳು, ನಂಬಿಕೆಗಳು, ಮೌಲ್ಯಗಳು ಇತ್ಯಾದಿಗಳ ಬೇರುಗಳು ಇತಿಹಾಸದಲ್ಲಿ ಚಾಚಿಕೊಂಡಿರುವುದರಿಂದ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೫. ನಮೂನೆ ವಿಧಾನ**

ಅಧ್ಯಯನ ವ್ಯಾಪ್ತಿಯಾದ ಸುರಪುರ ತಾಲೂಕಿನ ಎಲ್ಲಾ ಹಳ್ಳಿಗಳನ್ನು ಒಳಪಡಿಸುವುದು ಅಸಾಧ್ಯವಾಗಿದೆ. ಏಕೆಂದರೆ ಅಧ್ಯಯನವು ನಿಗದಿತ ಸಮಯವನ್ನು ಹೊಂದಿದೆ. ಆದ್ದರಿಂದ ಈ ವಿಧಾನವು ಬಳಸುವ ಅವಶ್ಯಕತೆಯಿದೆ

**೬. ಸಂಖ್ಯಾಶಾಸ್ತ್ರೀಯ ವಿಧಾನ**

ಸಮುದಾಯದ ವಿದ್ಯಮಾನಗಳಿಗೆ ಸಂಬಂಧಿಸಿದ ವಿಭಿನ್ನ ಅಂಶಗಳ ನಡುವಿನ ಪರಸ್ಪರ ಸಂಬಂಧವನ್ನು ಅರ್ಥಮಾಡಿಕೊಳ್ಳುವಲ್ಲಿ ಸಂಖ್ಯಾ ಸಂಗ್ರಹಣ ನೆರವಾಗುವುದರಿಂದ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೭. ತುಲನಾತ್ಮಕ ವಿಧಾನ**

ಈ ಸಮುದಾಯಗಳ ಸಮಾಜೋ ಆರ್ಥಿಕ ಸ್ಥಿತಿಗತಿಗಳು ಮತ್ತು ಇತರ ಸಮುದಾಯಗಳ ಸಮಾಜೋ ಆರ್ಥಿಕ ಸ್ಥಿತಿಗತಿಗಳಿಗೆ ಹೋಲಿಕೆ ಮಾಡಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ:

ಈ ಪ್ರಬಂಧವು ಒಟ್ಟು ನಾಲ್ಕು ಅಧ್ಯಾಯಗಳು ಮತ್ತು ಸಮಾರೂಪವನ್ನು ಹೊಂದಿರುತ್ತವೆ. ಈ ನಾಲ್ಕು ಅಧ್ಯಾಯಗಳು ಈ ಕೆಳಗಿನ ವಸ್ತು ವಿಷಯಗಳನ್ನು ಹೊಂದಿವೆ.

ಮೊದಲು ಅಧ್ಯಾಯವು ಜಾಗತೀಕರಣದ ಅರ್ಥವನ್ನು, ಅಧ್ಯಯನ ಉದ್ದೇಶಗಳು, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಪ್ರಮೇಯಗಳನ್ನು ಒಳಗೊಂಡಿದೆ ಅಲ್ಲದೆ ಈ ಪ್ರಬಂಧ ಬರೆಯಲು ಅನುಸರಿಸಿದ ಅಧ್ಯಯನ ವಿಧಾನಗಳನ್ನು ಇಲ್ಲಿ ವಿವರಿಸಲಾಗಿದೆ. ಈ ಅಧ್ಯಯನದ ಕೊನೆಯಲ್ಲಿ ಬೇಡ ಮತ್ತು ಮೇದ ಸಮುದಾಯಗಳ ಇಲ್ಲಿಯವರೆಗೆ ನಡೆದ ಅಧ್ಯಯನ ಸಮೀಕ್ಷೆಯನ್ನು ನೀಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ, ಸುರಪುರ ತಾಲೂಕಿನ ಭೌಗೋಳಿಕ ವಿವರಗಳನ್ನು ಮತ್ತು ಸುರಪುರ ಸಂಸ್ಥಾನದ ಚರಿತ್ರೆಯಲ್ಲಿ ಬುಡಕಟ್ಟುಗಳ ಪಾತ್ರವನ್ನು ಸುರಪುರದ ಚಾರಿತ್ರಿಕೆ ಹಿನ್ನೆಲೆಯಿಂದ ಕಂಡುಕೊಳ್ಳಲಾಗಿದೆ. ಜೊತೆಗೆ ಬೇಡ ಮತ್ತು ಮೇದ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ಸಮುದಾಯಗಳ ಚರಿತ್ರೆಯನ್ನು ವಿವರಿಸಲು ಸೃಷ್ಠಿ ಪುರಾಣಗಳು, ಸಾಂಸ್ಕೃತಿಕ ನಾಯಕರುಗಳ ಹಿನ್ನೆಲೆಯನ್ನು ಬಳಸಿಕೊಳ್ಳಲಾಗಿದೆ.

ಅಧ್ಯಾಯ ಮೂರು, ಈ ಪ್ರಬಂಧದ ಮಹತ್ವದ ಭಾಗವಾಗಿದ್ದು, ಬುಡಕಟ್ಟುಗಳ ಸಾಮಾಜಿಕ ಸ್ಥಿತ್ಯಂತರ ಎಂಬ ಶೀರ್ಷಿಕೆಯಡಿ, ಪ್ರಸ್ತುತ ಸಂದರ್ಭದಲ್ಲಿ ಬೇಡ ಮತ್ತು ಮೇದ ಬುಡಕಟ್ಟುಗಳ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಸ್ಥಿತ್ಯಂತರಗಳನ್ನು ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದ ಬರವಣಿಗೆಯು House hold Survey ಮತ್ತು Case studಗಳನ್ನು ಆಧರಿಸಿದ ತಿಳುವಳಿಕೆಯಿಂದ ಬರೆಯಲಾಗಿದೆ.

ನಾಲ್ಕನೇಯ ಅಧ್ಯಾಯದಲ್ಲಿ, 'ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಾಂಸ್ಕೃತಿಕ ಸ್ಥಿತ್ಯಂತರ' ಎಂಬ ಶೀರ್ಷಿಕೆಯಡಿ, ಬುಡಕಟ್ಟುಗಳ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಜಾಗತೀಕರಣದ ಕಾರಣವಾದ ಅಂಶಗಳು, ಸ್ಥಿತ್ಯಂತರದ ಸ್ವರೂಪ, ಸ್ಥಿತ್ಯಂತರದ ಪರಿಣಾಮಗಳನ್ನು ಕುರಿತು ಚರ್ಚಿಸಲಾಗಿದೆ.

ಸಮಾರೋಪವು ಈ ಎಲ್ಲಾ ಅಧ್ಯಾಯಗಳನ್ನು ಸ್ಥೂಲವಾಗಿ ವಿವರಿಸುತ್ತದೆ ಮತ್ತು ಒಟ್ಟಾರೆ ಅಧ್ಯಾಯನದ ಫಲಿತಗಳನ್ನು ಸಮಾರೋಪದಲ್ಲಿ ನೀಡಲಾಗಿದೆ.

## ಸುರಪುರ ತಾಲ್ಲೂಕಿನ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನೆಲೆ

### ಚಾರಿತ್ರಿಕ ಹಿನ್ನೆಲೆ

ಭಾರತದ ಚರಿತ್ರೆಗೆ ಸಂಬಂಧಿಸಿದ ಬರವಣಿಗೆಗಳಿಗೆ ವಸಾಹತುಶಾಹಿ ಆಡಳಿತವು ನಾಂದಿ ಹಾಡಿತು. ಏಕೆಂದರೆ ಯುರೋಪಿಯನ್ನರು ತಮ್ಮ ಆಡಳಿತದ ಭದ್ರತೆಗಾಗಿ ಮತ್ತು ತಮ್ಮ ಆಡಳಿತವನ್ನು ಮುಂದುವರೆಸುವ ಆಶಯದಿಂದ ಇಲ್ಲಿಯ ಜನರ ಭಾಷೆ, ಸಂಪ್ರದಾಯ, ಜನಾಂಗ, ಕಾನೂನು ಕಟ್ಟಳೆಗಳನ್ನು ಅಭ್ಯಸಿಸತೊಡಗಿದರು. ನಂತರ ಅವರು ರಾಜಕೀಯ ಇತಿಹಾಸದ ಕಡೆ ಮುಖಮಾಡಿದರು. ಕ್ರಮೇಣವಾಗಿ ರಾಜಕೀಯ ಇತಿಹಾಸದ ಜೊತೆಗೆ ಸಾಮಾಜಿಕ ಆರ್ಥಿಕ, ಧರ್ಮ, ಕಲೆ ಮತ್ತು ಶಿಲ್ಪಕ್ಕೆ ಗಮನಹರಿಸಲಾರಂಭಿಸಿದರು. ಅಲ್ಲದೆ ದೇಶಿಯ ಬರವಣಿಗೆಗಳು ಸಹ ಈ ನಿಟ್ಟಿನಲ್ಲಿ ಹೆಜ್ಜೆಯಿಟ್ಟವು. "ಇಪ್ಪತ್ತನೆಯ ಶತಮಾನದ ಅರ್ಧಭಾಗದಿಂದ ರಾಜಮನೆತನಗಳ ಕೇಂದ್ರಿಕೃತ ಇತಿಹಾಸ ಬಿಟ್ಟು ಸಮಾಜದ ಇತರೆ ವರ್ಗಗಳ ಅಧ್ಯಯನವು ಮಂದಗತಿಯಲ್ಲಿ ಪ್ರಾರಂಭವಾಯಿತು."[1] "ಇದರ ಫಲವಾಗಿ ನಂತರದ ದಶಕದಲ್ಲಿ ಇತಿಹಾಸ ಲೇಖನದ ಸ್ವರೂಪದಲ್ಲಿ ಗಣನೀಯ ಪ್ರಮಾಣದ ಬದಲಾವಣೆಗಳು ಕಾಣಲಾರಂಭಿಸಿದವು."[2]

ಕರ್ನಾಟಕದ ಗುಲಬರ್ಗಾ ಜಿಲ್ಲೆಯಲ್ಲಿ ಬರುವ ಸುರಪುರ ತಾಲೂಕವನ್ನು ಸುರರಪುರ (ದೇವತೆಗಳ ಊರು) ಸುರಪುರ ಎಂದು ಕರೆಯುತ್ತಾರೆ. ಸುರಪುರ ಪುರಾತನ ಕಾಲದಿಂದಲೂ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಕೇಂದ್ರವಾಗಿದೆ. ಈ ಪ್ರದೇಶವು ಕಲ್ಯಾಣಿ ಚಾಲುಕ್ಯರಿಂದ ಹಿಡಿದು ಸುರಪುರ ಅರಸರ ಕಾಲದವರೆಗೂ, ಔರಂಗಜೇಬನ ಆಳ್ವಿಕೆಯಿಂದ ಹೈದ್ರಾಬಾದಿನ ನಿಜಾಮ್‌ನವರೆಗೂ ವಿವಿಧ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ಅಲ್ಲದೆ ಸುರಪುರವು ಪ್ರಾಗೈತಿಹಾಸಕ್ಕೆ ಒಳಪಟ್ಟಿತ್ತು ಎಂಬುದು ಭೂವಿಜ್ಞಾನಿ ರಾಬರ್ಟ್ ಬ್ರೂಸ್ ಪೂಟ್, ಮೇಡೋಸ್ ಟೇಲರ್, ಅ.ಸುಂದರ ಮತ್ತು ಕೆ.ಪದ್ದಯ್ಯನವರು ನಡೆಸಿದ ಸಂಶೋಧನೆಗಳಿಂದ ತಿಳಿಯುತ್ತದೆ.

ಇತಿಹಾಸ ಪೂರ್ವ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬೇಕಾದರೆ ಭೂ ಶೋಧನೆಗಳ ವರದಿಯನ್ನು, ನಿವೇಶನಗಳಲ್ಲಿ ಸಂಗ್ರಹಿಸಿಲಾದ ವಿವಿಧ ಬಗೆಯ ಅವಶೇಷಗಳನ್ನು ಅವಲಂಬಿಸಬೇಕಾಗುತ್ತದೆ. ಆದಕಾರಣ ಈ ಸಂಶೋಧಕರು ಈ ಆಧಿಮಾನವನಿಗೆ ಸಂಬಂಧಿಸಿದ ಪ್ರಾಚ್ಯವಸ್ತುಗಳನ್ನು ಹಾಗೂ ಕಡುಗತ್ತಿ, ಕೈಕೊಡಲಿ, ಕೈಗುದ್ದಲಿ, ಉಳಿ ಇತ್ಯಾದಿಗಳನ್ನು ಈ ಪ್ರದೇಶದಲ್ಲಿ ಪತ್ತೆಹಚ್ಚಿರುವರು. ಇವುಗಳ ಆದಿಮಾನವನಿಗೆ ಸಂಬಂಧಿಸಿದ ಕುರುಹುಗಳಾಗಿ ರುವುದರಿಂದ ಆದಿಮಾನವನು ಇಲ್ಲಿ ವಾಸವಾಗಿದ್ದನು ಎಂಬುದು ತಿಳಿಯುತ್ತದೆ.

ಆದ್ದರಿಂದ ಈ ಪ್ರದೇಶದಲ್ಲಿ ಆದಿ ಶಿಲಾಯುಗದಿಂದ ಹಿಡಿದು ನೂತನ ಶಿಲಾಯುಗದ ವರೆಗಿನ ಸಂಸ್ಕೃತಿ ಇದ್ದಿತು ಎಂದು ತಿಳಿಯಬಹುದು. ಅಲ್ಲದೆ ನಾಗರಿಕತೆಯು ಬೆಳವಣಿಗೆಯಾದಂತೆ ಈ ಪ್ರದೇಶವು ಬೆಳವಣಿಗೆಯಾಗತೊಡಗಿತು. ಹೀಗೆ ಬೆಳವಣಿಗೆ ಹೊಂದಿ ಈ ಭಾಗವು ವಿವಿಧ ರಾಜಮನೆತನಗಳ ಆಳ್ವಿಕೆಯಲ್ಲಿ ಮತ್ತಷ್ಟು ಐತಿಹಾಸಿಕ ಮಹತ್ವ ಪಡೆಯಿತು.

ಸುರಪುರವು ಕಲ್ಯಾಣಿ ಚಾಲುಕ್ಯರು, ದೇವಗಿರಿಯ ಯಾದವರು, ಕಲ್ಯಾಣದ ಕಳಚೂರಿಗಳ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಇಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತದೆ. ಈ ಶಾಸನಗಳು ಆಡಳಿತ ಘಟಕಗಳ ಬಗ್ಗೆ, ದೇವರಿಗೆ ನೀಡಿದ ದಾನದತ್ತಿಗಳ ಬಗ್ಗೆ ಮಾಹಿತಿ ಒದಗಿಸುತ್ತವೆ. ಈ ರಾಜಮನೆತನಗಳ ಸೈನಿಕ ವ್ಯವಸ್ಥೆಯು ಇತಿಹಾಸವನ್ನು ತಿಳಿದಾಗ ಈ ಪ್ರದೇಶ ಬುಡಕಟ್ಟು ಸಮುದಾಯಗಳ ಜನರು ಸೈನಿಕರಾಗಿದ್ದರು ಎಂಬುದು ತಿಳಿಯುತ್ತದೆ.

ಈ ಪ್ರದೇಶದಲ್ಲಿ ಅನೇಕ ರಾಜಮನೆತನಗಳು ಆಳ್ವಿಕೆ ಮಾಡಿದರೂ ವಾಗಣಗೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುರಪುರ ಸಂಸ್ಥಾನವನ್ನು ಸ್ಥಾಪಿಸಿ, ಆಳ್ವಿಕೆಯನ್ನು ಪ್ರಾರಂಭಿಸಿದ ಸಂಸ್ಥಾನದ ಮೂಲ ಪುರುಷ ಅಥವಾ ಸಂಸ್ಥಾಪಕ ಗಡ್ಡಿಪಿಡ್ಡನಾಯಕನಾಗಿದ್ದಾನೆ. ನಂತರ ಕಾಲದಲ್ಲಿ ಪೀತಾಂಬರ ಬಹರಿಪಿಡ್ಡನಾಯಕನು ಸುರಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಪ್ರಾರಂಭಿಸಿದನು. ಭಾರತದ ಉಪಖಂಡದಲ್ಲಿ ಆದರಲ್ಲೂ ಕರ್ನಾಟಕದ ಬೇರೆ ಬೇರೆ ಪ್ರದೇಶಗಳ ಅಥವಾ ರಾಜ್ಯಗಳ ಉಗಮಕ್ಕೆ ಸಂಬಂಧಿಸಿದ ಜನಪ್ರಿಯ ಮೂಲಗಳಿರುವಂತೆ ಸುರಪುರವು ಕೂಡ ಮೂಲವನ್ನು ಹೊಂದಿದೆ. ಮೂಲವು ಈ ರೀತಿಯಾಗಿದೆ. ಸುರಪುರ ಸ್ಥಾಪನೆಯ ಸಮಯದಲ್ಲಿ ರಾಜನು ತನ್ನ ಗುರು ಗೋಪಣ್ಣ ಜಂಗಮರೊಂದಿಗೆ ಹೊರಟಾಗ, ಮೊಲವೇ ನಾಯಿಯನ್ನು ಹಿಡಿಯುವ ವಿಲಕ್ಷಣ ದೃಶ್ಯವನ್ನು ಕಂಡು ಇದೇ ಸುರಪುರದ ಸ್ಥಾಪನೆಗೆ ಸೂಕ್ತ ಸ್ಥಳವೆಂದು ಗುರುತಿಸಿದನು.[೩]

ಸುರಪುರ ಸಂಸ್ಥಾನವನ್ನು ಸುಮಾರು ಹನ್ನೆರಡು ಜನ ಅರಸರು ಆಳ್ವಿಕೆ ಮಾಡಿದ್ದಾರೆ. ಒಟ್ಟಾರೆಯಾಗಿ ಸುರಪುರದ ರಾಜವಂಶದವರು ಬೇಡರಾಗಿದ್ದು ಗೋಸಲವಂಶಕ್ಕೆ ಸೇರಿದವರಾಗಿದ್ದಾರೆ.

ಸುರಪುರದ ದೊರೆಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಔರಂಗಜೇಬ, ಬಿಜಾಪುರದ ಆದಿಲ್‌ಶಾಹಿಗಳ ಮತ್ತು ಮರಾಠರ ದಾಳಿಗಳನ್ನು ಎದುರಿಸಬೇಕಾಗಿತ್ತು. ಸುರಪುರದ ದೊರೆಗಳು ಇವರೆಲ್ಲರನ್ನು ಎದುರಿಸಿರುವುದಕ್ಕೆ ಬೇಡ ಪಡೆಗಳು ಕಾರಣವಾಗಿವೆ ಎಂಬುದು ಔರಂಗಜೇಬನ ಒಂದು ಮಾತಿನಿಂದ ಸ್ಪಷ್ಟವಾಗುವುದು. "೧೬೭೦ರಲ್ಲಿ ಮೊಗಲ ಸೈನ್ಯ ಹಾಗೂ ಬೇಡರ ಸೈನ್ಯ ಒಂದಕ್ಕೊಂದು ವಾಗಣಗೇರಿ ಗುಡ್ಡದಲ್ಲಿ ಎದುರಿಗೆ ಬಂದಾಗ ಬೇಡರ ಸೈನ್ಯ ಸ್ವಲ್ಪ ಪ್ರಮಾಣದಲ್ಲಿದ್ದರೂ ಕೂಡ ಅವರ ಶೂರತನ ಹಾಗೂ ಸಾಹಸಗಳನ್ನು ಕಂಡು ಔರಂಗಜೇಬನು "ಏ ಕಿಸಿಸೆ ನಹೀ ಡರನೇವಾಲೆ ಲೋಗ್ ಬೇಡರ ಲೋಗ್"[9] ಎಂದು ನುಡಿದನು.

ಸುರಪುರದ ದೊರೆಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಹಲವಾರು ಯುದ್ಧಗಳನ್ನು ಮಾಡಿರುವರು ಅವುಗಳು 'ಸಾತಾರ ಕಾಳಗ', 'ಲಾಲನಟೇಕಡೆ ಕಾಳಗ', 'ಪುಲಚೇರಿ ಕಾಳಗ', 'ಪೇಶ್ವೆಯರ ಕಾಳಗ' ಏಳು ಪಾಳ್ಯದ ಮೇಲೆ ಯುದ್ಧ, ಪೇಂಡಾರಿಯರೊಡನೆ ಯುದ್ಧ, ಕರ್ನೂಲಿನ ಕಾಳಗ ಇತ್ಯಾದಿಗಳಾಗಿವೆ. ಸುರಪುರವು ಶೂರ, ದೀರರಾದ, ಬಲಿಷ«ರಾದ ಸೈನಿಕರಿಂದ ಕೂಡಿದ ಸುಸಜ್ಜಿತವಾದ ಸೈನಿಕ ವ್ಯವಸ್ಥೆಯನ್ನು ಹೊಂದಿತ್ತು ಎಂಬುದು ಈ ಯುದ್ಧಗಳಿಂದ ತಿಳಿಯುತ್ತದೆ. ಸುರಪುರದ ಅರಸರು ತಮ್ಮ ಸೈನ್ಯವನ್ನು ವ್ಯವಸ್ಥೆಗೈಯಲು ಗುರಿಕಾರ, ಸರ್‌ಹವಲ್ದಾರ, ಸರ್ನೌಬತ್ತು, ಗಾರಡಿ ಇತ್ಯಾದಿ ಹುದ್ದೆಗಳನ್ನು ಅಸ್ತಿತ್ವಕ್ಕೆ ತಂದಿದ್ದರು. ಈ ಹುದ್ದೆಗಳ ಹೆಸರು ಇಂದಿಗೂ ಬುಡಕಟ್ಟುಗಳ ಮನೆತನಗಳ ಹೆಸರುಗಳಿರುವುದು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದ ಅವಲೋಕನದಿಂದ ತಿಳಿಯುತ್ತದೆ. ಇದರಿಂದ ಬುಡಕಟ್ಟುಗಳು ಸುರಪುರದ ಸೈನ್ಯದಲ್ಲಿ ಕೇಳವಮಟ್ಟದ ಹುದ್ದೆಯಿಂದ ಹಿಡಿದು ಉನ್ನದ ಹುದ್ದೆಗಳನ್ನು ಹೊಂದಿದ್ದಾರೆಂದು ತಿಳಿಯುತ್ತದೆ. ಒಟ್ಟಾರೆಯಾಗಿ ಸುರಪುರದ ಸೈನ್ಯವು ಬುಡಕಟ್ಟು ಸೈನ್ಯವಾಗಿತ್ತು ಎಂಬುದು ಸ್ಪಷ್ಟವಾಗುವುದು.

ಸುರಪುರ ಸಂಸ್ಥಾನದ ಅರಸರು ಆಡಳಿತವನ್ನು ಸುವ್ಯವಸ್ಥೆಗೈಯಲು ಸುಬೇದಾರ, ಕುಲಕರ್ಣಿ, ದೇಸಾಯಿ, ಜಾಗೀರದಾರ ಎಂಬ ಇತ್ಯಾದಿ ಹುದ್ದೆಗಳು ಅಸ್ತಿತ್ವಕ್ಕೆ ತಂದರು ಅಲ್ಲದೆ ಮಂತ್ರಿಗಳು, ಸೇನಾ ಮುಖ್ಯಸ್ಥರು, ಉನ್ನತ ಆಡಳಿತಾಧಿಕಾರಿಗಳು ಇವರ ಆಡಳಿತ ವ್ಯವಸ್ಥೆಯಲ್ಲಿ ಇದ್ದರು. ಈ ಹೆಸರು ಬುಡಕಟ್ಟು ಮನೆತನದ ಹೆಸರುಗಳಾಗಿರುವುದರಿಂದ ಬುಡಕಟ್ಟುಗಳು ಇವರ ಆಡಳಿತದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದರು ಎಂದು ತಿಳಿಯುತ್ತದೆ.

ಔರಂಗಜೇಬನ ಮರಣದ ನಂತರದ ಉತ್ತರಾಧಿಕಾರಿಗಳೆಲ್ಲರು ದುರ್ಬಲರಾಗಿದ್ದರಿಂದ ದಕ್ಷಿಣ ಭಾರತದಲ್ಲಿ ಹೈದರಾಬಾದಿನ ನಿಜಾಂ ಮತ್ತು ಮರಾಠರು ಪ್ರಬಲರಾದರು. ಸುರಪುರದ ಅರಸರ ನಿಜಾಮ್‌ರವರ ಪರವಾಗಿ ಯುದ್ಧಕಾರ್ಯಗಳಲ್ಲಿ ಭಾಗವಹಿಸಿ ಅವರ ಗೌರವಕ್ಕೆ ಪಾತ್ರರಾದರು.

ಇದೇ ವೇಳೆ ಬ್ರಿಟೀಷರ ಹಸ್ತಕ್ಷೇಪ ಭಾರತದಲ್ಲೂ ಭದ್ರವಾಗಿ ಬೇರೂರಿತ್ತು. ನಿಜಾಮ್‌ರವರು ಬ್ರಿಟೀಷರ ಆಧೀನತೆಗೆ ಒಳಗಾದ ನಂತರ ಸುರಪುರ ಸಂಸ್ಥಾನವು ಪರೋಕ್ಷವಾಗಿ ನಿಜಾಮ್‌ರವರ ಹಿಡಿತದಲ್ಲಿದ್ದರಿಂದ ಈ ಸಂಸ್ಥಾನದಲ್ಲಿ ಬ್ರಿಟೀಷರು ನೆಲೆಯೂರಿದರು.

"ನಿಜಾಮ್‌ರವರು ಸುರಪುರ ಸಂಸ್ಥಾನದಿಂದ ೧೫ ಲಕ್ಷ ರೂಪಾಯಿಯನ್ನು ವರ್ಷಕ್ಕೆ ಪರಗಣಿಯಾಗಿ ತೆಗೆದುಕೊಳ್ಳುತ್ತಿದ್ದರು."[೫] ೧೮೪೧ರಲ್ಲಿ ಸುರಪುರದ ಅರಸ ರಾಜಾ ಕೃಷ್ಣಪ್ಪ ನಾಯಕ ಮರಣ ಹೊಂದಿದನು. ಈತನ ಮಗ ನಾಲ್ವಡಿ ವೆಂಕಟನಾಯಕನು ಅಪ್ರಾಪ್ತ ವಯಸ್ಕನಾಗಿದ್ದನು. ಬ್ರಿಟೀಷರು ಮತ್ತು ನಿಜಾಮ್‌ರವರ ಕುತಂತ್ರಗಳ ಪರಿಣಾಮವಾಗಿ ಸುರಪುರದ ಸಂಸ್ಥಾನದ ಬೊಕ್ಕಸ ಖಾಲಿಯಾಯಿತು. ಈ ಕಾಲಕ್ಕೆ ಸುರಪುರ ರಾಜಕೀಯ ಕಾರ್ಯಬಾರಿಯಾಗಿ ಬ್ರಿಟೀಷರ ಸರ್ಕಾರವು ಮೇಡೋಸ್ ಟೇಲರನನ್ನು ೧೮೪೩ರಲ್ಲಿ ನೇಮಿಸಿತು. ಈತನು ಬಾಲಕ ವೆಂಕಟಪ್ಪನಾಯಕನ ಮೇಲ್ವಿಚಾರಣೆಯ ಜೊತೆಗೆ ಸಂಸ್ಥಾನದ ಆಡಳಿತ ಸುಧಾರಣೆಗಳನ್ನು ಜಾರಿಗೊಳಿಸಿದನು. ಅಲ್ಲದೆ ರಾಜಕೀಯ ಪರಿಸ್ಥಿತಿಯನ್ನು ಉತ್ತಮ ಪಡಿಸಿ ಬೇಡ ಸಮುದಾಯದ ಪ್ರೀತಿ ವಿಶ್ವಾಸಕ್ಕೂ ಪಾತ್ರನಾದನು. ೧೮೫೩ರಲ್ಲಿ ವೆಂಕಟಪ್ಪನಾಯಕನು ಪ್ರಬುದ್ಧ ವಯಸ್ಸಿಗೆ ಬಂದನಂತರ ಮೇಡೋಸ್ ಟೇಲರನು ಸುರಪುರದ ಅಧಿಕಾರವನ್ನು ವೆಂಕಟಪ್ಪನಾಯಕನಿಗೆ ವಹಿಸಿಕೊಟ್ಟನು.

"೧೮೫೩ರಲ್ಲಿ ರಾಜ್ಯ ಸೂತ್ರಗಳನ್ನು ವಹಿಸಿಕೊಂಡ ವೆಂಕಟಪ್ಪನಾಯಕನು ವಿದೇಶಿಯರಾದ ಬ್ರಿಟೀಷರ ನಿರಂಕುಶ ವರ್ತನೆಯ ವಿರುದ್ಧ ಜನರ ಅಸಮಾಧಾನವನ್ನು ಕಂಡ, ಈತನು ಹುಟ್ಟು ನಾಡಿನ ವಿಮೋಚನೆಗಾಗಿ ಹೋರಾಡಲು ಕಟ್ಟಿಬದ್ಧನಾದನು. ಈ ಉದ್ದೇಶ ಸಾಧನೆಗಾಗಿ ರೋಹಿಲರನ್ನು ಅರಬ್ಬರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡನು. ನೆರೆಹೊರೆಯ ಸಂಸ್ಥಾಗಳ ಅರಸರು ರಾಜಾ ನಾಲ್ವಡಿ ವೆಂಕಟಪ್ಪನಾಯಕನಿಗೆ ಸಹಾಯ ನೀಡಲು ಕಾತರರಾಗಿದ್ದರು. ಈ ಎಲ್ಲಾ ನಾಯಕರು ದಕ್ಷಿಣ ಭಾರತದ ಹೋರಾಟದ ನೇತೃತ್ವವನ್ನು ವೆಂಕಟಪ್ಪನಾಯಕನು ವಹಿಸಿಕೊಳ್ಳಬೇಕೆಂದು ನಿರ್ಧರಿಸಿದರು."[೬]

ಇದರಿಂದ ಸುರಪುರದ ಸ್ವಾತಂತ್ರ್ಯ ಸಂಗ್ರಾಮದ ಕೇಂದ್ರವಾಗಿ ಪರಿಣಮಿಸಿತು. ಬ್ರಿಟೀಷ್ ಸಾಮ್ರಾಜ್ಯವನ್ನು ಎದುರಿಸುವ ನಾನಾ ಯೋಜನೆಗಳ ರಹಸ್ಯಸ್ತಾನವಾಯಿತು. ಈ ಕ್ರಾಂತಿಯ ಕಿಡಿಯನ್ನು ಹಚ್ಚಿ ಸೈನ್ಯದಲ್ಲಿ ದಂಗೆಯೆಬ್ಬಿಸಲು ವೆಂಕಟಪ್ಪನಾಯಕನು ಮಹಿಪಾಲ್‌ಸಿಂಗ್ ಎಂಬ ಗೂಢಾಚಾರನನ್ನು ಕಳುಹಿಸಿದಾಗ ಈತನು ಬ್ರಿಟೀಷರಿಂದ ಬಂಧಿಯಾದನು. ಈತನಿಂದ ಈ ಎಲ್ಲಾ ದಂಗೆಗೆ ವೆಂಕಟಪ್ಪನಾಯಕ ಕಾರಣ ಎಂದು ಬ್ರಿಟೀಷರಿಗೆ ಗೊತ್ತಾಯಿತು. ಆದ್ದರಿಂದ ಆ ಪ್ರದೇಶದಲ್ಲಿ ಪ್ರಬಲವಾದ ದಂಗೆಯಾಗಬಹುದೆಂದು ತಿಳಿದು ಬ್ರಿಟೀಷ ಕ್ಯಾಪ್ಟನ್ ನ್ಯೂಬೇರಿಯ ನೇತೃತ್ವದಲ್ಲಿ ಸೈನಿಕ ತುಕಡಿಯನ್ನು ಸುರಪುರಕ್ಕೆ ಕಳುಹಿಸದನು.

ಫೆಬ್ರುವರಿ ೭, ೧೮೫೮ರಂದು ಬ್ರಿಟೀಷ್ ಸೈನ್ಯವು ಕ್ಯಾಪ್ಟನ್ ವಿಂಡ್‌ಹ್ಯಾಮ್ ನೇತೃತ್ವದಲ್ಲಿ ಸುರಪುರದಿಂದ ೫ಕಿ.ಮೀ. ದೂರದಲ್ಲಿರುವ ರುಕ್ಮಾಪುರ ಬಗಡಿ ಮೇಲೆ ತನ್ನ ಕ್ಯಾಂಪನ್ನು ಹಾಕಿ ಹೆಚ್ಚಿನ ಸೈನ್ಯ ಬರುವುದನ್ನು ನಿರೀಕ್ಷಿಸುತ್ತಿತ್ತು. ಅಂದೇ ರಾತ್ರಿ ಸುರಪುರ ಸೈನ್ಯವು ಜವಾದಾರ ತಜದಿಕ್ ಹುಸೇನ್ ಹಾಗೂ ಜವಾದಾರ ಲಕ್ಷ್ಮಣಸಿಂಗರ ನೇತೃತ್ವದಲ್ಲಿ ಚಮತ್ಕಾರಿಕ ರೀತಿಯಲ್ಲಿ ಬ್ರಿಟೀಷ್ ಸೈನ್ಯದ ಮೇಲೆ ಆಕ್ರಮಣ ಮಾಡಿ ಭಾರಿ ಪ್ರಮಾಣದಲ್ಲಿ ಸೈನಿಕರನ್ನು ಗಾಯಗೊಳಿಸಿ, ಮರಳಿ ಕೋಟೆಯನ್ನು ಹತ್ತಿದರು. ಮರುದಿವಸ ೮ನೇ ತಾರೀಖದಂದು ಬ್ರಿಟೀಷ್ ಸೈನ್ಯದ ಇನ್ನೊಂದು ತುಕಡಿ ಮೇಜರ್ ಹ್ಯಾಗ್ಸ್ ನೇತೃತ್ವದಲ್ಲಿ ವಿಂಡ್‌ಹ್ಯಾಮನ ಸೈನ್ಯದಲ್ಲಿ ಬಂದು ಸೇರಿತು. ಮದ್ರಾಸ್ ಕುದುರೆದಳದ ಸೇನಾಪತಿ ಕ್ಯಾಪ್ಟನ್ ಜಾರ್ಜ್ ನ್ಯೂಬರಿ ಸುರಪುರದ ಮೇಲೆ ಪ್ರತಿ ಆಕ್ರಮಣ ಮಾಡಿದನು. ಭಯಂಕರ ಯುದ್ಧದಲ್ಲಿ ಕ್ಯಾಪ್ಟನ್ ನ್ಯೂಬರಿಯೇ ಮಡಿದ. ಆತನ ಸಹಾಯಕ ಲೆಫ್ಟಿನಂಟ್ ಸ್ಟೂವರ್ಡನಿಗೆ ಮಾರಣಾಂತಿಕ ಗಾಯಗಳಾದವು ಅಂದು ಸ್ವತಃ ರಾಜ ಯುದ್ಧದಲ್ಲಿ ಭಾಗವಹಿಸಿದ್ದ. ಬ್ರಿಟೀಷ್ ಸೈನ್ಯ ಇದರಿಂದ ಕಕ್ಕಾಬಿಕ್ಕಿಯಾಯಿತು. "ಬ್ರಿಟೀಷ್ ಅಧಿಕಾರಿಗಳನ್ನು ಕೆಡವಿದ ನಂತರ ವಿಜಯೋತ್ಸಾಹದಲ್ಲಿ ಬೇಡರ ಸೈನ್ಯವು ಗುಡ್ಡಗಳನ್ನೇರಿ ಕೋಟೆಯನ್ನು ಪ್ರವೇಶಿಸಿತು. ಇಂದಿಗೂ ಕೂಡ ಕ್ಯಾಪ್ಟನ್ ಜಾರ್ಜ್ ನ್ಯೂಬರಿ ಸಮಾಧಿ ರುಕ್ಮಾಪುರ ಮೈದಾನದಲ್ಲಿದೆ."[೭]

ಬ್ರಿಟೀಷರ ಭಾರಿ ಸೈನ್ಯವು ಕೋಟೆಯ ಮೇಲೆ ಆಕ್ರಮಣ ಮಾಡಿತಲ್ಲದೆ ಭೀಮರಾಯನೆಂಬ ವಂಚಕನ ಮೂಲಕ ಕೋಟೆಯ ಗುಪ್ತ ಮಾಹಿತಿಯನ್ನು ತಿಳಿದುಕೊಂಡ ಬ್ರಿಟೀಷರು ಕೋಟೆಯನ್ನು ವಶಪಡಿಸಿಕೊಂಡರು. ಭೀಮರಾಯನು ಕೈಗೊಂಡ ಘೋರ ವಂಚನೆಯ ಕಥೆ ಸುರಪುರದಲ್ಲಿ ಇನ್ನೂ ಪ್ರಚಲಿತವಿದೆ. ಇಷ್ಟಾದರೂ ಧೃತಿಗೆಡದೆ ವೆಂಕಟಪ್ಪನಾಯಕನು ನಿಜಾಮ್‌ರವರ ಸಹಾಯ ಕೇಳಲು ಹೈದರಾಬಾದಿಗೆ ಹೋದನು. ಹೈದರಾಬಾದಿನ ನಿಜಾಮ್‌ರವರ ಮಂತ್ರಿಯಾದ ಸಾಲಾರಜಂಗನ ಮೂಲಕ ವೆಂಕಟಪ್ಪನಾಯಕನನ್ನು ಬಂಧಿಸಿ ಬ್ರಿಟೀಷರಿಗೆ ಒಪ್ಪಿಸಲಾಯಿತು. ಇವನ ಮರಣದ ಬಗ್ಗೆ ಬಿನ್ನಾಭಿಪ್ರಾಯಗಳಿವೆ.

ರಾಜಾ ನಾಲ್ವಡಿ ವೆಂಕಟಪ್ಪನಾಯಕನ ಮರಣದ ನಂತರ ೧೮೫೭ರಲ್ಲಿ ನಡೆದ ದಂಗೆಗಳಲ್ಲಿ ಬ್ರಿಟೀಷರಿಗೆ ಸಹಾಯ ಸಲ್ಲಿಸಿದ ಹೈದರಾಬಾದಿನ ನಿಜಾಮ್‌ರವರಿಗೆ ಸುರಪುರ ಪ್ರದೇಶವನ್ನು ೧೮೬೧ರಂದು ಕೊಡಲಾಯಿತು. ಸುರಪುರವು ಆಂಗ್ಲರಿಂದ ನಿಜಾಮ್‌ರವರ ವಶಕ್ಕೆ ಹೋದ ನಂತರ 'ಶೋರಾಪುರ' ಎಂದು ಹೆಸರು ಬಂದಿತು. ನಿಜಾಮ್‌ರವರ ಆಳ್ವಿಕೆಗೆ ಒಳಗಾದ ಪ್ರದೇಶಗಳು ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿದ್ದವು.

"೧೫ ಆಗಸ್ಟ್ ೧೯೪೭ರಂದು ಭಾರತ ಸ್ವಾತಂತ್ರವಾದಾಗ ಬ್ರಿಟೀಷರು ಭಾರತದಿಂದ ಹೋಗುವ ಸಮಯದಲ್ಲಿ ನಿಜಾಮ ಸಂಸ್ಥಾನಕ್ಕೆ ಸ್ವತಂತ್ರವಾಗಿರಬಹುದು ಇಲ್ಲವೆ ಭಾರತದೊಂದಿಗೆ ಅಥವಾ ಪಾಕಿಸ್ತಾನದೊಂದಿಗೆ ಸೇರಬಹುದು ಎಂದು ಹೇಳಿದರು. ೧೮ನೇ ಸೆಪ್ಟಂಬರ್ ೧೯೪೮ರವರೆಗೆ ನಿಜಾಮ್‌ರವರು ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಿಗೆ ಸ್ವಾತಂತ್ರ್ಯ ನೀಡದೆ ತನ್ನ ಆಳ್ವಿಕೆಗೆ ಒಳಪಡಿಸಿಕೊಂಡರು. ಇದರಿಂದ ಈ ಭಾಗದಿಂದ ಜನರು ಸ್ವಾತಂತ್ರ್ಯಕ್ಕಾಗಿ ನಿಜಾಮ್‌ರ ವಿರುದ್ಧ ಹೋರಾಡಿ ಸುರಪುರ ಪ್ರದೇಶವನ್ನು ಸ್ವಾತಂತ್ರ್ಯಗೊಳಿಸಿದರು."[೮]

**ಸುರಪುರ ತಾಲೂಕಿನ ಭೌಗೋಳಿಕ ಹಿನ್ನೆಲೆ**

ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯಲ್ಲಿ ಬರುವ ಹತ್ತು ತಾಲೂಕುಗಳಲ್ಲಿ ಸುರಪುರ ಒಂದಾಗಿದೆ. ಸುರಪುರ ನಗರವು ಸುತ್ತಲೂ ಗುಡ್ಡಗಳಿಂದ ಆವೃತ್ತವಾಗಿರುವುದರಿಂದ ನಿಸರ್ಗದ ದುರ್ಗದಂತೆ ಗೋಚರಿಸುತ್ತದೆ. ಪಿತಾಂಬರಿ ಬಹರಿ ಪಿಡ್ಡನಾಯಕನು ಈ ಸ್ಥಳದ ಮಹತ್ವವನ್ನು ಕಂಡು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಸುರಪುರವು ಸುಮಾರು ೨೦೧ ಗ್ರಾಮಗಳನ್ನು ಹೊಂದಿದೆ. ಹತ್ತು ತಾಲ್ಲೂಕುಗಳಲ್ಲಿ ದೊಡ್ಡ ತಾಲೂಕು ಎನಿಸಿದೆ. ಇದರ ವಿಸ್ತೀರ್ಣವು ೧೮೨೦ ಚ.ಕಿ.ಮೀ ಇದೆ. ಸುರಪುರ ತಾಲೂಕಿನ ಉತ್ತರಕ್ಕೆ ಜೇವರ್ಗಿ ತಾಲೂಕು, ಪೂರ್ವಕ್ಕೆ ಶಹಾಪುರ ತಾಲೂಕು, ಪಶ್ಚಿಮಕ್ಕೆ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕು ಮತ್ತು ದಕ್ಷಿಣಕ್ಕೆ ಹರಿಯುವ ಕೃಷ್ಣ ನದಿಯು ಸುರಪುರ ಸೀಮೆಯಂತಿದ್ದು ರಾಯಚೂರು ಜಿಲ್ಲೆಯಿಂದ ಸುರಪುರವನ್ನು ಪ್ರತ್ಯೇಕಿಸುತ್ತದೆ.

ಸುರಪುರ ತಾಲೂಕಿನಲ್ಲಿ ಒಟ್ಟು ೨೦೧ ಗ್ರಾಮಗಳಿವೆ. ಹುಣಸಗಿ, ಕಕ್ಕೇರಾ, ಕೊಡೇಕಲ್, ಕೆಂಭಾವಿ, ಸುರಪುರ ಎಂಬ ೫ ಹೋಬಳಿಗಳಿವೆ. ೪೨ ಗ್ರಾಮ ಪಂಚಾಯತಿಗಳಿವೆ. ಅಲ್ಲದೆ ೬ ಮಳೆ ಮಾಪನ ಕೇಂದ್ರಗಳಿವೆ. ತಾಲೂಕಿನಾದ್ಯಂತ ಕಿರಿಯ ಪ್ರಾಥಮಿಕ, ಹಿರಿಯ ಪ್ರಾಥಮಿಕ, ಹಾಗೂ ಪ್ರೌಢಶಾಲೆಗಳಿವೆ. ಇವುಗಳು ಸರ್ಕಾರಿ ಶಾಲೆಗಳು, ಅನುದಾನ ರಹಿತ ಶಾಲೆಗಳು, ಅನುದಾನ ಸಹಿತ ಶಾಲೆಗಳು ಮತ್ತು ಖಾಸಗಿ ಶಾಲೆಗಳು ಕಂಡುಬರುತ್ತವೆ. ಸುರಪುರ ತಾಲೂಕಿನಲ್ಲಿ ೯ ಪದವಿ ಪೂರ್ವ ಮಹಾವಿದ್ಯಾಲಯ, ೪ ಪದವಿ ಮಹಾವಿದ್ಯಾಲಯಗಳಿವೆ. "ಈ ಭಾಗದ ಒಟ್ಟು ಸಾಕ್ಷರತಾ ಪ್ರಮಾಣ ೪೮.೪ ಇದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ೩೫ ರಷ್ಟು ಪ್ರಮಾಣದಷ್ಟಿದೆ."[೯]

ಸುರಪುರ ತಾಲೂಕು ಜನಸಂಖ್ಯೆಯಲ್ಲಿ ಮೂರನೆಯ ಸ್ಥಾನವನ್ನು ಪಡೆದಿದೆ. ಸುರಪುರ ತಾಲೂಕಿನ ಒಟ್ಟು ಜನಸಂಖ್ಯೆ ೨೦೦೧ ರ ಜನಗಣತಿ ಪ್ರಕಾರ, ೩.೩೬.೭೫೫. ಸ್ತ್ರೀಯರ ಜನಸಂಖ್ಯೆ ಪ್ರಮಾಣ ೧.೬೬.೬೬೩ (ಎಂ.ಬಿ.ಪಾಟೀಲ್) ಇದೆ. ಈ ಪ್ರದೇಶದಲ್ಲಿ ಎಲ್ಲಾ ವರ್ಗದ ಜನರು ಕಂಡುಬರುತ್ತಾರೆ. ಅಂದರೆ ಬ್ರಾಹ್ಮಣರು, ಕುರುಬರು, ಲಿಂಗಾಯತರು,

ಉಪ್ಪಾರರು, ವೈಶ್ಯರು, ಮರಾಠರು ಮಾರವಾಡಿಗಳು, ಅಕ್ಕಸಾಲಿಗರು, ರಜಪೂತರು, ಮುಸ್ಲಿಮರು, ವಡ್ಡರು, ಕ್ರಿಶ್ಚಿಯನ್ನರು ಜೈನರು, ಮೇದಾರರು, ಬೇಡರು ಮತ್ತು ಹರಿಜನರು ಮತ್ತು ಅಲೆಮಾರಿ ಸಮುದಾಯಗಳು ಇತ್ಯಾದಿ ವಿವಿಧ ಜನ ಸಮುದಾಯಗಳು ಕಂಡುಬರುತ್ತವೆ.

ಕೃಷ್ಣಾ ನದಿಯು ಈ ಭಾಗದ ಮುಖ್ಯ ನದಿಯಾಗಿದೆ. ಕೃಷ್ಣ ಮೇಲ್ದಂಡೆಯ ಯೋಜನೆಯ ಮೂಲಕ ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯವನ್ನು ಕಲ್ಪಿಸಲಾಗಿದೆ. ಅಲ್ಲದೆ ಜನರು ಕೆರೆ, ಬಾವಿ, ಹಳ್ಳಗಳ, ಕೊಳವೆ ಬಾವಿಗಳ ಮೂಲಕ ನೀರಾವರಿ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಇಲ್ಲಿ ನೀರಾವರಿಯಿರುವುದರಿಂದ ಕೃಷಿಯ ಪ್ರಧಾನವಾದ ಉದ್ಯೋಗವಾಗಿದೆ. ಇಲ್ಲಿಯ ರೈತರು ಮುಂಗಾರು ಬೆಳೆ ಮತ್ತು ಹಿಂಗಾರು ಬೆಳೆ ಎಂಬ ಎರಡು ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಈ ಪ್ರದೇಶದ ಕೃಷಿ ಭೂಮಿಯು ಎರೇಭೂಮಿ, ಕರ್ಲಿಭೂಮಿ, ಕೆಂಪುಭೂಮಿ, ಉಸುಕು ಮಿಶ್ರಿತ ಭೂಮಿ ಎಂಬ ವಿವಿಧ ಬಗೆಯಿಂದ ಕೂಡಿದೆ. ಸಜ್ಜೆ, ಬಿಳಿಜೋಳ ಹೆಸರು, ಉದ್ದು, ತೊಗರಿ, ಸೇಂಗಾ, ಗೋಧಿ, ಸೂರ್ಯಕಾಂತಿ, ಕುಸುಬೆ ಇತ್ಯಾತಿ ಬೆಳೆಗಳನ್ನು ಬೆಳೆಯುತ್ತಿದ್ದರು ಆದರೆ ಇತ್ತೀಚಿನ ದಿನಗಳಲ್ಲಿ ಹತ್ತಿ ಮತ್ತು ಬ್ಯಾಡಗಿ ಮೆಣಸಿನಕಾಯಿಯನ್ನು ಹಾಗೂ ಅತ್ಯಧಿಕ ಪ್ರಮಾಣದಲ್ಲಿ ಭತ್ತವನ್ನು ಬೆಳೆಯುತ್ತಾರೆ. ಅಲ್ಲಲ್ಲಿ ತೋಟಾಗಾರಿಕೆ ಮತ್ತು ರೇಷ್ಮೆ ಕೃಷಿ ಕಂಡುಬರುತ್ತದೆ. ಅಲ್ಲದೆ ಕುಂಬಾರಿಕೆ, ಕಮ್ಮಾರಿಕೆ, ನೇಕಾರಿಕೆ, ಬಿದಿರಿನಿಂದ ಬುಟ್ಟೆ ಹೆಣೆಯುವುದು, ನಾರಿನಿಂದ ಹಗ್ಗವನ್ನು ಹೊಸೆಯುವುದು, ಹೈನುಗಾರಿಕೆ ಇತ್ಯಾದಿ ಉಪಕಸುಬುಗಳು ಈ ಪ್ರದೇಶದಲ್ಲಿ ಕಂಡುಬರುತ್ತವೆ.

"ಸುರಪುರ ತಾಲೂಕು ವೈವಿಧ್ಯಮಯ ಖನಿಜ ನಿಕ್ಷೇಪಗಳಿಂದ ಕೂಡಿದ ಸ್ಥಳವಾಗಿದೆ. ಇಲ್ಲಿ ಅತ್ಯಂತ ಬೆಲೆಯುಳ್ಳ ವಸ್ತುವೆಂದು ಪರಿಗಣಿಸಲ್ಪಡುವ ಚಿನ್ನದ ಗಣಿಗಳು ತಾಲೂಕಿನ ಮಂಗಳೂರು ಮತ್ತು ಮೂಕನಗವಿಯ ಸುತ್ತಮುತ್ತ ಇದ್ದವೆಂದು ಭೂಗರ್ಭ ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ."[೧೦]

"ತಂತಿ ಮತ್ತು ಶಿಲೀಂಧ್ರನಾಶಕಗಳ ತಯಾರಿಕೆಯಲ್ಲಿ ತಾಮ್ರವನ್ನು ವ್ಯಾಪಕವಾಗಿ ಉಪಯೋಗಿಸುತ್ತಾರೆ. ೧೮೮೧, ೧೮೯೪, ಮತ್ತು ೧೮೯೯ರಲ್ಲಿ 'ಡೆಕ್ಕನ್ ಮೈನಿಂಗ್ ಕಂಪನಿ'ಯವರು ತಿಂಥಣಿ ಪ್ರದೇಶವನ್ನು ಪರೀಕ್ಷಿಸಿ ಅವು ತಾಮ್ರದ ಅದರಿಗಾಗಿ ತೊಡಿದ ಗಣಿಗಳೆಂದು ತಿಳಿಯುತ್ತದೆ. ೧೯೬೩ರಲ್ಲಿ ಭೂವಿಜ್ಞಾನ ಮತ್ತು ಸರ್ವೇಕ್ಷಣಾ ಇಲಾಖೆಯು ತಿಂಥಣಿ ಪ್ರದೇಶವನ್ನು ಪರೀಕ್ಷಿಸಿ ಸುಮಾರು ೧೩೫ ಕಿ.ಮೀ. ಆಳದವರೆಗೆ ಈ ನಿಕ್ಷೇಪ ವ್ಯಾಪಿಸಿರುವುದೆಂದು ಊಹಿಸಿದ್ದಾರೆ. ಕೆಲವು ತಿಂಗಳ ಕಾಲ ಈ ಪ್ರದೇಶದಲ್ಲಿ ಗಣಿಗಾರಿಕೆಯನ್ನು ನಡೆಸಿ ಲಾಭ ಕಂಡುಬರದೆ ಇರುವುದರಿಂದ ಗಣಿಗಾರಿಕೆಯನ್ನು ನಿಲ್ಲಿಸಲಾಯಿತು. ಇದಲ್ಲದೆ ಬೆಂಚುಕಲ್ಲು, ಸುಣ್ಣಶಿಲೆಗಳ ನಿಕ್ಷೇಪಗಳು ದೊರೆಯುತ್ತವೆ ಎಂಬುದು ತಿಳಿದು ಬಂದಿದೆ."[೧೧]

ಈ ಪ್ರದೇಶದಲ್ಲಿ ತಯಾರಾಗುತ್ತಿದ್ದ ಕೈಮಗ್ಗ ಸೀರೆಗಳು ಪ್ರಸಿದ್ಧವಾಗಿದ್ದವು. ಸಿದ್ಧಪಡಿಸಿದ ಉಡುಪು ಬಂದಿದ್ದರಿಂದ ಈ ಸೀರೆಗಳು ಬೇಡಿಕೆ ಕಳೆದುಕೊಂಡಿವೆ. ಇಂದು ನೇಕಾರಿಕೆಯು ಅವನತಿಯ ಹಂಚಿನಲ್ಲಿದೆ. ಇಟ್ಟಿಗೆ ಭಟ್ಟಿಗಳು, ಕಲ್ಲು ಪಾಲಿಶ್ ಮಾಡುವ ಯಂತ್ರಗಳು, ಖಾದಿ ಗ್ರಾಮೋದ್ಯೋಗದ ಉತ್ಪಾದನಾ ಕೇಂದ್ರಗಳು ಈ ಭಾಗದಲ್ಲಿವೆ.

**ಬೇಡ ಬುಡಕಟ್ಟಿನ ಹಿನ್ನೆಲೆ**

ಭಾರತದಲ್ಲಿ ಹಲವಾರು ಬುಡಕಟ್ಟುಗಳಿರುವುದನ್ನು ಕಾಣುತ್ತೇವೆ. ಈ ಬುಡಕಟ್ಟು ಸಮುದಾಯಗಳ ಇತಿಹಾಸ ಬಹಳ ಪ್ರಾಚೀನವಾದುದು. ಮೂಲತಃ ಕಾಡುವಾಸಿಗಳಾದ ಬುಡಕಟ್ಟುಗಳು ಕಾಲಾಂತರದಲ್ಲಿ ನಾಗರಿಕತೆಯ ವಿಕಾಸವಾದಂತೆ ಬುಡಕಟ್ಟುಗಳು ತಮ್ಮದೆಯಾದ ಸಾಂಸ್ಕೃತಿಕ ಚಹರೆಗಳೊಂದಿಗೆ ಸಮಕಾಲೀನ ಸ್ಥಿತಿಗೆ ಬಂದು ತಲುಪಿದೆ. ನಮ್ಮ ದೇಶದ ಇತಿಹಾಸದಲ್ಲಿ ಇಂತಹ ಹಲವಾರು ಜಾತಿ, ಜನಾಂಗ, ಬುಡಕಟ್ಟುಗಳ ಸಾಂಸ್ಕೃತಿಕ, ವೈಶಿಷ್ಟ್ಯಗಳಿರುವುದು ತಿಳಿಯಬಹುದಾಗಿದೆ. ಸಾಮಾನ್ಯವಾಗಿ ಎಲ್ಲಾ ಬುಡಕಟ್ಟುಗಳಲ್ಲಿಯೂ ಪ್ರಪಂಚದ ಮೂಲವನ್ನು ಕುರಿತು ಸ್ವಾರಸ್ಯಕರವಾದ ಜನಪದ ಕಥೆಗಳು, ಐತಿಹ್ಯಗಳಿದ್ದು ಪ್ರಪಂಚದ ಹುಟ್ಟಿನ ಆರಂಭಕ್ಕೆ ತಮ್ಮ ಬುಡಕಟ್ಟಿನ ಮೂಲ ಪುರುಷನೇ ಕಾರಣ ಎಂದು ಹೇಳಿಕೊಳ್ಳುವುದು ಸಾಮಾನ್ಯ, ಅಂದರೆ ಪ್ರತಿಯೊಂದು ಸಮುದಾಯಕ್ಕೂ ಅವರದೇಆದ ಚಾರಿತ್ರಿಕ, ಪೌರಾಣಿಕ, ಸಾಮಾಜಿಕ ಹಿನ್ನೆಲೆಗಳನ್ನು ಕಾಣುತ್ತೇವೆ. ಇದರಂತೆ ಮೂಲತಃ ಕಾಡಿನಲ್ಲಿ ವಾಸವಾಗಿದ್ದುಕೊಂಡು ಬೇಟೆಯ ವೃತ್ತಿಯಿಂದ ಬದುಕುವ ಬೇಡ ಜನಾಂಗವು ಕೂಡ ತನ್ನದೆಯಾದ ಚಾರಿತ್ರಿಕ, ಪೌರಾಣಿಕ, ಸಾಮಾಜಿಕ ಹಿನ್ನೆಲೆಗಳನ್ನು ಹೊಂದಿದೆ. ನಾಗರೀಕತೆಯ ಬೆಳವಣಿಗೆಯ ಹಂತದಲ್ಲಿ ಇವರು ಗ್ರಾಮವಾಸಿಗಳಾಗಿ ಕೃಷಿ, ಮುತ್ತಿತರ ವೃತ್ತಿಗಳನ್ನು ಕೈಗೊಂಡಿರುವರು.

**ಬೇಡ ಪದದ ಅರ್ಥ**

'ಬೇಡ' ಎನ್ನುವ ಪದವು ವ್ಯಾಧ ಎನ್ನುವ ಸಂಸ್ಕೃತ ಪದದಿಂದ ಬಂದಿದೆ. ವ್ಯಾಧ ಎಂದರೆ ಬೇಟೆಯಾಡುವುದೆಂದರ್ಥ. ಈ ಸಮುದಾಯಕ್ಕೆ ಬೇಡ ಎಂದು ಹೆಸರು ಬರಲು ಕಾರಣ, ಈ ಸಮಾಜವು ವೇದ ಕಾಲದಿಂದ ಬಂದುದ್ದರಿಂದ ವೇದ ಎನ್ನುವ ಪದವು ವ್ಯಾಧ ಎಂದು ರೂಢಿಯಲ್ಲಿ ಬಂದಿತು. ಅಲ್ಲದೆ ಈ ಸಮಾಜಕ್ಕೆ ಬೇಡರು ಎಂದು ಕರೆಯುತ್ತಾರೆ. "ಬೇಡರು ಎಂಬುದು ಉರ್ದು ಶಬ್ದ. ಉರ್ದು ಭಾಷೆಯಲ್ಲಿ ಬೇಡರ ಎಂದರೆ ಯಾರಿಗೂ ಹೆದರದವನು ಎಂದರ್ಥ. ಈ ಬೇಡರ ಸಮಾಜದವರು ಯಾರಿಗೂ ಹೆದರದೆ ಇದ್ದ ಶೂರ ಜನ, ಜೀವನದಲ್ಲಿ ಸುಖ ಬರಲಿ, ದುಃಖ ಬರಲಿ ಭಾವಾವೇಶಕ್ಕೆ ಒಳಗಾಗದೇ ನಗುನಗುತ್ತಾ

ಇರುವ ಜನ."[೧೨] ಆದ್ದರಿಂದ ಈ ಸಮಾಜದವರಿಗೆ ಉರ್ದು ಶಬ್ಧದಿಂದ 'ಬೇಡರ' ಎಂದು ಕರೆಯುತ್ತಾರೆ. ೧೬೭೦ರಲ್ಲಿ ಮೊಘಲ್ ಸೈನ್ಯ ಮತ್ತು ಬೇಡರ ಸೈನ್ಯ ಒಂದಕ್ಕೊಂದು ಆದಿಲ್‌ಶಾಹಿಯ ಸಮೀಪವಿರುದ ವಾನಗೇರಿಯ ಗುಡ್ಡದಲ್ಲಿ ಎದುರಿಗೆ ಬಂದಾಗ ಬೇಡ ಸಮುದಾಯದ ಸೈನ್ಯ ಸ್ವಲ್ಪ ಪ್ರಮಾಣದಲ್ಲಿದ್ದರೂ ಕೂಡ ಅವರ ಶೂರತನ ಹಾಗೂ ಸಾಹಾಸಗಳನ್ನು ಕಂಡಾಗ ಔರಂಗಜೇಬನು 'ಏ ಕಿಸಿಸೇ ನಹಿ ಡರನೆವಾಲೆ ಲೋಗ್, ಬೇಡರ್ ಲೋಗ್ ಎಂದು ನುಡಿದನು. ಅಂದಿನಿಂದ ಈ ಸಮಾಜಕ್ಕೆ ಉರ್ದು ಶಬ್ದದಿಂದ ಬೇಡರು ಎಂದು ಕರೆದರು. "ಈ ಜನಾಂಗದವರು ಎಂದಿಗೂ ಬಿಕ್ಷೆಯನ್ನು ಬೇಡರು ಎಂದು ತಿಳಿಯುವ ಮೂಲಕ ಬೇಡರು ಎಂದು ಹೆಸರು ಬಂದಿದೆ."[೧೩]

ಮೂಲತಃ ಬೇಡರು ಕಾಡುವಾಸಿಗಳು ಇವರು ತಮ್ಮ ಜೀವನಕ್ಕಾಗಿ ಬೇಟೆಯಾಡಿ ಬದುಕುವುದೇ ರೂಢಿಯಾಗಿತ್ತು. ಇದರಿಂದ ಬೇಟೆ ಮತ್ತು ಬೇಡ ಎರಡು ಶಬ್ಧಗಳು ಒಂದೆಂದು ತಿಳಿದುಬರುತ್ತದೆ. ಇದರಿಂದ ಬೇಡ ವೃತ್ತಿಗನುಗುಣಾವಾಗಿ ಬೇಡ ಎಂದು ರೂಪಾಂತರವಾಗಿದೆ. ಬೇಟೆಯ ಮೂಲಕವೇ ಗುರುತಿಸಿಕೊಂಡವನ್ನು ಬೇಡರು ಎಂದು ಕರೆದರು ಸಮಾಜದಲ್ಲಿ ವೃತ್ತಿಯ ಆಧಾರದ ಮೇಲೆ ಜಾತಿಯ ಹೆಸರನ್ನು ಸಂಭೋಧಿಸುವುದು ರೂಢಿಯಲ್ಲಿದೆ.

**ಬೇಡರ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆ**

ಒಂದು ಮೂಲದ ಪ್ರಕಾರ 'ಬೇಡಬುಡಕಟ್ಟಿನವರು ಕಣ್ವ ಮಹರ್ಷಿಯ ವಂಶಜರೆಂದು ನಂಬಿಕೆಯಿದೆ. ಇದರಿಂದ ಅವರು ತಮ್ಮನ್ನು ಕಾಣ್ಯಮ ಕುಲದವರೆಂದು ಕರೆದುಕೊಳ್ಳುತ್ತಾರೆ.

ಆದಿ ಮೂಲವಾದ ಭಗವಂತನು ಬೇಡರ ಚಂಚು ಲಕ್ಷ್ಮೀಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನು ಎಂಬ ಐತಿಹ್ಯ ಇಂದಿಗೂ ಪ್ರಚಲಿತವಿದೆ. ಅದರಂತೆ ಮನುವಿನ ಏಳನೆಯ ತಲೆಯವನಾಗಿ ಚಂದ್ರವಂಶದಲ್ಲಿ ಕಾರ್ತ್ಯಾವೀರ್ಯಾರ್ಜುನ ಹುಟ್ಟಿದ. ಈತನ ದೇಹವು ರಾಜ್ಯವನ್ನು ಆಳುತ್ತಿರವಾಗ ವೈಷ್ಣವ ಯಾಗಾದಿಗಳನ್ನು ಮಾಡುತ್ತಿದ್ದಾಗ ಇದೇ ಸಂದರ್ಭದಲ್ಲಿ ಜಮದಗ್ನಿ ಈತನಿಂದ ಹತನಾದ. ಇದರಿಂದ ಕುಪಿತನಾದ ಪರಶುರಾಮನು ಕಾರ್ತ್ಯಾವೀರಾರ್ಜುನ ಹಾಗೂ ಅವನ ಮಕ್ಕಳನ್ನು ಕೊಂದು ಕ್ಷತ್ರೀಯರೆಲ್ಲರನ್ನು ಸದೆ ಬಡಿಯಲು ೨೧ ಬಾರಿ ಭೂಮಿಯ ಮೇಲೆ ದಂಡೆಯಾತ್ರೆ ಕೈಗೊಂಡ, ಇದರಿಂದ ಬೆದರಿದ ಕ್ಷತ್ರೀಯರೆಲ್ಲರು ಕಾಡಿಗೆ ಹೋಗಿ ಕಾಡುವಾಸಿಗಳಾದರು. ಇವರೇ ಮುಂದೆ ಬೇಡರಾದರೆಂದು ಹೇಳುತ್ತಾರೆ.

ಇದರಿಂದ ಬೇಡರು ಚಂದ್ರವಂಶದ ಕ್ಷತ್ರೀಯರಾಗಿದ್ದು, ವೈಷ್ಣವ ಪಂಥದ ಅನುಯಾಯಿಗಳಾಗಿದ್ದರು ಎಂದು ತಿಳಿಯುತ್ತದೆ.

"ವಾಲ್ಮೀಕಿ ತ್ರೇತಾಯುಗದ ಮೂಲ ಸಂವೇದನೆಯನ್ನು ಬದುಕಿನ ಮೌಲ್ಯವನ್ನು, ಸೋಲು ಗೆಲವುಗಳನ್ನೆಲ್ಲಾ ಒಟ್ಟಾಗಿ ಹಿಡಿದಿಟ್ಟ ದಾರ್ಶನಿಕ ಶಕ್ತಿ ದಕ್ಕಿತು. ಅದು ರಾಮಾಯಣದ ರೂಪದಲ್ಲಿ ಹೊರಬಿತ್ತು. ಇಂಥ ಶಕ್ತಿ ಸಿಗುವ ಮುನ್ನ ಆದಿಮಾನವನಂತೆ ಅಲೆಯುತ್ತಿದ್ದ ವಾಲ್ಮೀಕಿ ಪ್ರಚೇತನ ಮತ್ತು ಪ್ರಮೋಜಿಯವರ ಮಗನಾಗಿ ಹುಟ್ಟಿ ತಮಸಾ ನದಿ ತೀರದಲ್ಲಿ ವಾಸವಾಗಿದ್ದನು."[೧೪] ನಂತರ ಕಿರಾತರ ಯಜಮಾನನಾಗುವ ಮೂಲಕ ಕಾಮಕೇತು, ಲಕ್ಷ, ಮೀನ ಮಲ್ಲರೆಂಬ ಹನ್ನೆರಡು ಮಕ್ಕಳಲ್ಲಿ ಏಳು ಮಕ್ಕಳನ್ನು ಆಯ್ಕೆ ಮಾಡಿಕೊಂಡು ವಾಲ್ಮೀಕಿಯು ಅವರ ಮುಖಂಡತ್ವದಲ್ಲೇ ಪಡೆ ರಚಿಸಿ ದರೋಡೆ ನಡೆಸುತ್ತಿದ್ದನೆಂದು ಒಂದು ಅಭಿಪ್ರಾಯವಿದೆ. ಮುಂದೆ ಕಾಡಿನಲ್ಲಿ ಚದುರಿ ಹೋದ ಈ ಪಡೆಗಳನ್ನು ಅಧಾರವಾಗಿಟ್ಟುಕೊಂಡು ಹಲವರು ಬೇಡ ಜನಾಂಗದ ಮೂಲ, ವಾಲ್ಮೀಕಿ ಎಂದು ವಾದಿಸುತ್ತಾರೆ. ಇದರಿಂದ ಬೇಡರು ತಮ್ಮನ್ನು ವಾಲ್ಮೀಕಿ, ವಾಲ್ಮೀಕಿ ಮಕ್ಕಳೆಂದು ಕರೆಯಿಸಿಕೊಳ್ಳಲು ಇಚ್ಛಿಸುತ್ತಾರೆ.

ಇದರಿಂದ ಬೇಡರು ಮೂಲ ನಿವಾಸಿಗಳಾಗಿರುವ ಊರುಗಳಲ್ಲಿರುವ ಏಳು ಕೆರೆಗಳಿಗೆ, ಏಳು ಬುಡಗಳಿವೆ ಎಂದು ಹೇಳುವುದಕ್ಕೆ ಏಳು ವಾಲ್ಮೀಕಿ ಮಕ್ಕಳ ಪಡೆಗಳೇ ಆಧಾರವಾಗಿವೆ. ಅಲ್ಲದೆ ಬೇಡರು ಸಾಮಾನ್ಯವಾಗಿ ಕಾಡುವಾಸಿಗಳಾಗಿದ್ದು ಬೇಟೆಯು ವೃತ್ತಿಯನ್ನಾಗಿ ಮಾಡಿಕೊಂಡಿದ್ದರು ಎಂಬುದು ತಿಳಿಯುತ್ತಿದೆ.

ಬೇಡರ ಕಣ್ಣಪ್ಪನು ಬೇಡರ ಸಾಂಸ್ಕೃತಿಕ ನಾಯಕನಾಗಿದ್ದಾನೆ. ಬೇಟೆಯೋ ಇವನ ವೃತ್ತಿಯಾಗಿತ್ತು. ಇವನು ಶಿವನ ಭಕ್ತನಾಗಿದ್ದು ದಿನನಿತ್ಯ ಶಿವಲಿಂಗವನ್ನು ಪೂಜೆ ಮಾಡುತ್ತಿದ್ದನು. ಪೂಜೆಗೆ ಬೇಟೆಯಿಂದ ತಂದ ಪ್ರಾಣಿಗಳ ಮಾಂಸವೇ ನೈವೇದ್ಯ ಮಾಡುತ್ತಿದ್ದನು. ಇದು ಇವನ ದಿನ ನಿತ್ಯದ ಕರ್ಮವಾಗಿತ್ತು. ಆದರೆ ಒಂದು ದಿನ ಬೇಟೆ ಸಿಗಲಿಲ್ಲ. ಆವತ್ತು ಶಿವಲಿಂಗ ಪೂಜೆಗೆ ನೈವೇದ್ಯ ಇಲ್ಲವಾಗಿ ಚಿಂತಿತನಾದನು. ಕೊನೆಗೆ ತನ್ನ ಕಣ್ಣನ್ನೆ ಶಿವಲಿಂಗಕ್ಕೆ ಅರ್ಪಿಸಿ ಶಿವನನ್ನು ಸಂತೃಪ್ತಿಪಡಿಸಿದನು ಎಂಬ ಕಥೆಯೂ ಇಂದಿಗೂ ಪ್ರಚಲಿತವಿದೆ.

ಈ ಕಥೆಯಿಂದ ಬೇಟೆಯೇ ಬೇಡರ ವೃತ್ತಿಯಾಗಿತ್ತು. ಬೇಟೆಯ ಮಾಂಸವನ್ನು ಶಿವಲಿಂಗಕ್ಕೆ ಆರ್ಪಿಸುವುದರಿಂದ ಬುಡಕಟ್ಟು ದೈವವಾದ ಶಿವನೇ ಆರಾಧ್ಯ ದೈವವಾಗಿದ್ದಾನೆ. ಅಲ್ಲದೆ ಬೇಡರ ಅರ್ಪಿತ ಭಕ್ತಿಯ ಆದರ್ಶವನ್ನು ತಿಳಿಯುತ್ತದೆ.

ಒಟ್ಟಾರೆಯಾಗಿ ಈ ಮೇಲಿನ ಎಲ್ಲಾ ಕಥೆಗಳಿಂದ ವಿಶ್ವದ ಮೂಲಿಗರೆ ಬೇಡರು, ಅಲ್ಲಿಂದಲೇ ಸಾಮಾಜಿಕ ವಿಕಸನದ ಘಟ್ಟಗಳನ್ನು ಪರಿಗಣಿಸಬಹುದು. ಬೇಟೆ ಮತ್ತು ಆಹಾರ ಸಂಗ್ರಹಣೆಯೇ ಇವರ ಮೂಲ ಕಸುಬು. ಇವರು ಮೂಲದಲ್ಲಿ ಶೈವ ಧರ್ಮದ ಆರಾಧಕರಾಗಿದ್ದರು. ನಂತರ ವೈಷ್ಣವ ಧರ್ಮದ ಆರಾಧಕರಾದರು. ಆದರೆ ಇಂದು ಈ ಎರಡು ಪಂಥಗಳು ಆರಾಧಕರು ಬೆಡರಾಗಿರುವುದು ತಿಳಿಯುತ್ತೇವೆ.

"ವಿದೇಶಿ ವಿದ್ವಾಂಸರಾದ ಬುಕನಾನ್ ಅವರ ಅಭಿಪ್ರಾಯದಂತೆ ಬೇಡ ಬುಡಕಟ್ಟಿನವರು ಮೂಲತಃ ದ್ರಾವೀಡ ಜನಾಂಗಕ್ಕೆ ಸೇರಿದವರಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ವೇದಕಾಲದಿಂದಲೂ ಬೇಡ ಬುಡಕಟ್ಟಿನ ಬಗ್ಗೆ ಹಲವಾರು ಆಧಾರಗಳು ದೊರೆಯುತ್ತಿರುವಾಗ ಅದರ ಜೊತೆಗೆ ಇವರು ಅನುಸರಿಸುವ ಸಂಪ್ರದಾಯ, ನಂಬಿಕೆ, ಆರಾಧನ ದೈವಗಳು ಹಾಗೂ ಬೆಟ್ಟ ಪರ್ವತಗಳು ಇನ್ನಿತರ ಮೂಲಾಂಶಗಳು ಗಮನಕ್ಕೆ ತೆಗೆದುಕೊಂಡು ನೋಡಿದಾಗ ಆರ್ಯರಿಗಿಂತ ಭಿನ್ನ ಸ್ಥಾನದಲ್ಲಿ ನಿಲ್ಲುತ್ತಾರೆ. ಇದರಿಂದ ಇವರು ದ್ರಾವಿಡ ಜನಾಂಗ ಎಂಬ ಅಂಶ ಸತ್ಯವಾಗುತ್ತದೆ."[೧೩]

ಚಾರಿತ್ರಿಕವಾಗಿ ಮೌರ್ಯರ ಕಾಲದಿಂದಲೂ ಬೇಡರು ಕಾಣಿಸಿಕೊಳ್ಳುತ್ತಾರೆ. ಕರ್ನಾಟಕದ ಪ್ರತಿಷ್ಠಿತ ರಾಜಮನೆತನಗಳಾದ ಶಾತವಾಹನ, ಕದಂಬ, ಗಂಗರು, ಚಾಲುಕ್ಯರು, ಹೊಯ್ಸಳರು, ವಿಜಯ ನಗರ ಅರಸರುಗಳ ಸೈನ್ಯದಲ್ಲಿ ಸೈನಿಕರಾಗಿ ಹಾಗೂ ಉನ್ನತ ಹುದ್ದೆಗಳನ್ನು ಪಡೆದು ಅನೇಕ ಯುದ್ಧಗಳಲ್ಲಿ ಗೆಲುವನ್ನು ತಂದುಕೊಟ್ಟವರು. ಅಲ್ಲದೆ ಅನೇಕ ಪಾಳೆ ಪಟ್ಟುಗಳನ್ನು ಸಂಸ್ಥಾನಗಳನ್ನು ಕಟ್ಟಿ ಸ್ವತಂತ್ರವಾಗಿ ಆಳ್ವಿಕೆ ಮಾಡಿದ ಉದಾಹಣೆಗಳು ಚರಿತ್ರೆಯಲ್ಲಿ ದಾಖಲಾಗಿವೆ. ಈ ಸಮುದಾಯದಲ್ಲಿ ವಾಲ್ಮೀಕಿ, ಶಬರಿ, ಧರ್ಮವ್ಯಾಧ, ನಳ ಚಕ್ರವರ್ತಿ, ಏಕಲವ್ಯ, ಬೇಡರ ಕಣ್ಣಪ್ಪ ಮುಂತಾದ ಪೌರಾಣಿಕ ಪುರುಷರು ಆಗಿಹೋಗಿದ್ದಾರೆ. ಅಲ್ಲದೆ ಶ್ರವಣಕುಮಾರ, ಮದಕರಿನಾಯಕ, ಸುರಪುರದ ವೆಂಕಟಪ್ಪನಾಯಕ ಹೀಗೆ ಹಲವಾರು ನಾಯಕರುಗಳು ಶೌರ್ಯ, ಸಾಹಸಗಳಿಗೆ ಹೆಸರಾದ ಚಾರಿತ್ರಿಕ ವ್ಯಕ್ತಿಗಳಿದ್ದಾರೆ. ಬ್ರಿಟೀಷರ ಆಡಳಿತ ಸಂದರ್ಭದಲ್ಲಿಯೂ ಕಾಣಿಕೆಯನ್ನು ನೀಡಿದ್ದಾರೆ.

**ಬೇಡ ಬುಡಕಟ್ಟಿನ ಪರ್ಯಾಯ ಪದಗಳು**

"ಬೇಡ ಬುಡಕಟ್ಟಿನವರಿಗೆ ಕಿರಾತ, ಶಬರ, ಕಂಕ, ನೈಪದ, ವ್ಯಾಧ, ವನಚರ, ನಿಷಾದ, ಬೆಂದ, ಕಣ್ಣಪ್ಪನಮಕ್ಕಳು, ದೊರೆನಾಯಕ, ನಿಷಾದ, ತಳವಾರ ಕುಳಿಂದ, ಪುಳಿಂದ, ಪುಳಿಂದಬಿಲ್ಲ, ವದನ್, ಭೋವಿ ಎಂಬ ಇನ್ನಿತರ ಪರ್ಯಾಯ ಹೆಸರುಗಳಿವೆ. ಇವರು ಪ್ರೋಟೋ ಅಸ್ಟ್ರಾಲಾಯಿಡ್ ಜನಾಂಗಕ್ಕೆ ಸೇರಿದ್ದು, ಭಾರತದಲ್ಲಿ ಇವರು ಮೂಲ ದ್ರಾವಿಡರಾಗಿದ್ದಾರೆ. ದ್ರಾವಿಡ ಭಾಷೆಯಲ್ಲಿ ಇವರನ್ನು ವೇಡನ, ಬಟ್ಟುವನ್ ಎಂದು, ಹಾಗೂ ಹಳಗನ್ನಡದಲ್ಲಿ ಬೇಡರ, ವೇಳರವಿದಿರ, ಬಿಲ್ಲ, ಬೆಂಟೆಯವರ, ಬೆಂಟೆಕಾರ, ವಿಯರ್, ಕಣಂದರ್, ಕೋವರ್ ಎಂಬ ಸಂವಾದಿ ಪದಗಳನ್ನು ಬಳಸಲಾಗಿದೆ."[೧೬] ಇಲ್ಲಿ ಕಂಡುಬರುವ ಬೇಡ ಬುಡಕಟ್ಟಿನ ಪರ್ಯಾಯ ಪದಗಳು ಪ್ರಾದೇಶಿಕವಾಗಿ, ಕಾಲಮಾನಕ್ಕನುಗುಣವಾಗಿ, ವೃತ್ತಿಗನುಗುಣವಾಗಿ, ಭಾಷೆಗೆ ಅನುಗುಣವಾಗಿ ವಿಭಿನ್ನವಾದ ಪದಗಳನ್ನು ಬಳಸಿರುವುದು ತಿಳಿದು ಬರುತ್ತದೆ. ಅದರ

ಜೊತೆಗೆ ಕೆಲವು ಪದಗಳನ್ನು ಅವಲೋಕಿಸಿದಾಗ ಬೇಡರು ಅರಣ್ಯವಾಸಿಗಳು, ಸೇವಕರು, ಕ್ರೂರ ಪ್ರವೃತ್ತಿಯುವರು, ಬೇಟೆಗಾರರು, ಮುಖಂಡರು ಎಂದು ತಿಳಿದುಬರುತ್ತದೆ.

"ಬೇಡ ಬುಡಕಟ್ಟಾಗಲಿ ಅಥವಾ ಇತರೆ ಯಾವುದೇ ಬುಡಕಟ್ಟಾಗಲಿ ಅಧ್ಯಯನ ಮಾಡುವಾಗ ಅವರು ಆಚರಣೆ ಮಾಡುವಂತಹ ದೇವರುಗಳು ಹೇಳಿಕೊಳ್ಳುವಂತಹ ನಾಮಾಂಕಿತಗಳು ಪ್ರಾದೇಶಿಕವಾಗಿ ಬೇರೆ ಬೇರೆ ಕಂಡುಬಂದರು ತಮ್ಮ ಜನ್ಮತವಾಗಿ ಬಂದಿರುವಂತಹ ಮೂಲವನ್ನು ಬದಲಾಯಿಸಿಕೊಂಡಿರುವುದು ಕಂಡುಬಂದಿಲ್ಲ."[೧೭] ಇದರಿಂದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದಲ್ಲಿ ವಿಭಿನ್ನ ಹೆಸರಿನಿಂದ ಅನುಮೋದಿಸಿರುವುದು ಬೇಡ ಬುಡಕಟ್ಟಿನಲ್ಲಿ ಕಂಡು ಬರುತ್ತದೆ. ಕರ್ನಾಟಕದಲ್ಲಿ ಬೇಡ ಬುಡಕಟ್ಟಿನವರು ಪ್ರಾದೇಶಿಕವಾಗಿ ಬೇಡ, ಬೇಡರ, ವಾಲ್ಮೀಕಿ, ದೊರೆ, ರಾಜಾ, ತಳವಾರ, ನಾಯಕನ ಮಕ್ಕಳು, ನಾಯಕ, ದೊರೆಮಕ್ಕಳು, ಕಣ್ಣಯ್ಯನ ಮಕ್ಕಳು, ವಾಲ್ಮೀಕಿ ವಂಶದವರು, ನಾಲ್ಕೋಡಿ, ಕಟ್ಟಿಮನೆ ಎಂಬ ಇತ್ಯಾದಿ ನಾಮಾಂಕಿತದಿಂದ ಅನುಮೋದಿಸಿರುವುದು ಕಂಡುಬರುತ್ತಿದೆ.

**ಬೇಡ ಬುಡಕಟ್ಟಿನ ಪ್ರಾದೇಶಿಕ ಪರ್ಯಾಯ ನಾಮಗಳು**

| | **ಪ್ರದೇಶ** | **ಹೆಸರುಗಳು** |
|---|---|---|
| ೧. | ತಮಿಳುನಾಡು | ನಾಯುಕ್ಡ, ನಾಯಿಡು, ಗೆಂಟು, ಬಿಲ್ಲರು, ನಾಯಕ್, ನಾಯ್ಕರು, ವೇಡನ್, ವೇತುಕನ್, ವೆತ್ತಲೆ, ನಾಯಿಕರ್ |
| ೨. | ಆಂಧ್ರಪ್ರದೇಶ | ನಾಯುನಿ, ನಾಯಿಡು, ಬೋಯಾ, ಬೋವಿ, ಬೋಯು, ಬೋಯಾಸು |
| ೩. | ಮಹಾರಾಷ್ಟ್ರ | ಬೇರಡ್, ರಾಮೋಶಿ, ರಾಣವಾಸಿ, ಥೆರಬೇಡ, ಮದಾರಬೇಡ |
| ೪. | ರಾಜಸ್ತಾನ, ಪಂಜಾಬ್ ಮಧ್ಯ ಪ್ರದೇಶ | ಬಿಲ್, ಬಾಲ್ಮೀಶಿ, ವಾಲ್ಮೀಕಿ, ನಾಯುಕಿ, ಮಾಂಗ್ |
| ೫. | ಕೇರಳ, ಮಲೇಶಿಯಾ | ನಾಯುರ್ |
| ೬. | ಉತ್ತರ ಭಾರತ | ವಾಸಿ |
| ೭. | ಕಾಶ್ಮೀರ | ಡೋಗ್ರಾ |
| ೮. | ಉತ್ತರ ಪ್ರದೇಶ | ಜಾಟ್ |
| ೯. | ಬಂಗಾಳ, ಬಿಹಾರ್ | ಸೇನ್ |
| ೧೦. | ಸಿಲೋನ್ | ವೇಟನ್, ವೇಡು, ಪಾಸ, ವಡ್ಡಾಸ್, ಬಂದರ, ನಾಯಕ. |
| ೧೧. | ಸಿಂಗಾಪುರ | ವಾಲ್ಮೀಕಿ |

(ಮೂಲ:ಡಂಗ್ ಡಿ.ಬಿ:೧೯೮೮:೩)

ಹಲವಾರು ಪ್ರದೇಶಕ್ಕನುಗುಣವಾಗಿ ಬೇಡ ಬುಡಕಟ್ಟಿನ ಪದಗಳು ಹಲವು ದೃಷ್ಟಿಯಿಂದ ಗಮನಾರ್ಹವಾಗಿವೆ. ಬೇಟೆಯ ವೃತ್ತಿಗೆ ಅನುಗುಣವಾಗಿ, ಮೂಲ ಪುರುಷರ ಅನುಗುಣವಾಗಿ, ಅರಣ್ಯವಾಸಿಗರೆಂಬ ಕಾರಣಕ್ಕೆ ಪೋಷಕರ ಹೆಸರಿನಿಂದ, ಪ್ರದೇಶಗಳ ಅನುಗುಣವಾಗಿ ಸಂಭೋದಿಸಿಕೊಂಡಿರುವುದು ಕಂಡುಬರುತ್ತದೆ.

ಹೀಗೆ ಬೇಡ ಜನಾಂಗದ ಉಗಮ ಮತ್ತು ವಿಕಾಸವನ್ನು ನೋಡುವಾಗ ನಾಡಿನ ಪ್ರಾಚೀನ ಜನಪದವನ್ನೇ ಆಶ್ರಯಿಸಬೇಕಾಗುತ್ತದೆ. ಹಾಗಾದಾಗ ಮಾತ್ರ ಇವರು ನಮಗೆ ಅರ್ಥವಾಗಬಲ್ಲರು. ಸಮುದಾಯದ ಅಧ್ಯಯನದ ಪರ್ವಕಾಲದಲ್ಲಿರುವ ನಮ್ಮ ಇಂದಿನ ಸಂಶೋಧನೆ ಬೇಡ ಸಮುದಾಯದಂತಹ ವಿಶಿಷ್ಟ ಸಂಸ್ಕೃತಿಯ ಪರಿಕರಗಳನ್ನು ಅತಿಬೇಗ ಗುರುತಿಸಿದಷ್ಟು ಅನುಕೂಲ, ಯಾಕೆಂದರೆ ನಾಗರಿಕತೆಯ ಮುದ್ರೆ ಇವರ ಮೇಲೆ ಪ್ರಬಲವಾಗಿ ಆಚ್ಛೊತ್ತಿರುವುದರಿಂದ ಅದರ ಉಳಿವು ಮುಂದಿನ ಅಭ್ಯಾಸಿಗರಿಗೆ ಅವಶ್ಯವಿದೆ.

ಮೇದರು ಆಂಧ್ರಪ್ರದೇಶ, ತಮಿಳುನಾಡು ರಾಜ್ಯಗಳಿಂದ ವಲಸೆ ಎಂದು ಕರ್ನಾಟಕದಾದ್ಯಂತ ಪಟ್ಟಣ ಮತ್ತು ಹಳ್ಳಿಗಳಲ್ಲಿ ನೆಲೆಸಿರುವರು. ಇವರನ್ನು ಸರ್ಕಾರವು ಪರಿಶಿಷ್ಟ ಪಂಗಡ (Scheduled tribes) ಪಟ್ಟಿಗೆ ಸೇರಿಸಿದೆ. ಇವರು ಸಾಮಾನ್ಯವಾಗಿ ಅಲೆಮಾರಿಗಳಾಗಿರುವರು. ಇತರ ಸಂಸ್ಕೃತಿಯ ಜೊತೆ ಬೆರೆಯ ಬೇಕಾಗುವುದು ಹಾಗೂ ಕೊಡುಕೊಳ್ಳುವಿಕೆಯಲ್ಲಿ ಇವರು ತಮ್ಮ ಆಚಾರ ವಿಚಾರಗಳನ್ನು ಮರೆತು ಬಿಟ್ಟಿರಬಹುದಾದರೂ ಆ ಸಾಕಷ್ಟು ತಮ್ಮದೆಯಾದ ಆಚರಣೆ, ಸಂಪ್ರದಾಯ, ನಂಬಿಕೆಗಳಿವೆ. ಆದರೆ ಇತರ ಬುಡಕಟ್ಟು ಸಮಾಜಗಳು ಹೊಂದಿರುವಷ್ಟು ಸಾಂಸ್ಕೃತಿಕ ವೈಶಿಷ್ಟ್ಯಗಳು ಹೊಂದಿಲ್ಲವೆಂದು ಹೇಳಬಹುದು.

ಮೇದರು ಸಾಂಪ್ರದಾಯಿಕವಾಗಿ ಬಿದಿರು ಮತ್ತು ಬೆತ್ತದಿಂದ ವ್ಯವಸಾಯಕ್ಕೆ ಉಪಯೋಗವಾಗುವ, ಮನೆಗೆ ಉಪಯೋಗವಾಗುವ ಮತ್ತು ದೇವರ ಆಚರಣೆಗಳಿಗೆ ಸಂಬಂಧಿಸಿದ ಮುಂತಾದ ವಸ್ತುಗಳನ್ನು ಹೆಣೆದು ಮಾರಾಟ ಮಾಡಿ ಕುಶಲ ಕರ್ಮಿಗಳಾಗಿ ಜೀವನ ಸಾಗಿಸುವವರಾಗಿದ್ದರು.

**ಮೇದ ಪದದ ಅರ್ಥ**

ಮೇದರನ್ನು ಮೇದರ, ಮೇದಾರ, ಮ್ಯಾದರ್ ಎಂದು ಕರೆಯುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಬಿದಿರಿನಿಂದ ಬುಟ್ಟಿ, ಚಾಪೆ, ಮೊರ ಮೊದಲಾದವನ್ನು ಹೆಣೆದು ಮಾರಿ ಜೀವಿಸುವವರನ್ನು ಮೇದಾರನೆಂದು ಕರೆಯುತ್ತಾರೆ. ನಿಘಂಟುಗಳಲ್ಲಿ ಪದಶಃ ಅರ್ಥ ಈ ರೀತಿಯಾಗಿದೆ. ಮೇದ(ನಾ), ಮೇದಃ ಬಿದಿರಿನಿಂದ ಬುಟ್ಟಿ, ಚಾಪೆ, ಮೊರ ತಯಾರಿಸುವವ ಎಂಬ ಅರ್ಥ ಕೊಡುತ್ತದೆ.

ಈ ಬುಡಕಟ್ಟಿನವರನ್ನು ಮೇದ, ಮೇದಾರ, ವ್ಯಾದರ ಮೇದಾರಿ, ಮೇದರ್ಕಳ್, ವ್ಯಾದ, ಮೇದರ್ಲ್ಲ ಅಥವಾ ಮೇದರ ಕಾರನ್, ಬುರಡ, ಬುಡ್ಡರ, ಗೌರಿಗರು ಎಂದು ಕರೆಯುತ್ತಾರೆ.

"ಇವರಲ್ಲಿ ಕನ್ನಡ ಮತ್ತು ತೆಲಗು ಮಾತನಾಡುವವರಿದ್ದಾರೆ. ಕನ್ನಡ ಮೇದರನ್ನು 'ಮೇದ', 'ಮೆದಾರ', ವ್ಯಾದರ, ಎಂದು ಸಂಭೋದಿಸಿದರೆ, ಮೆದರ್ಕಳ್, ಮೇದರ್ ಕಾರನ್ ಎಂದು ತೆಲಗು ಮಾತನಾಡುವವರನ್ನು ಹೆಸರಿಸುತ್ತಾರೆ. ಗೌರಿಗರು ಮೈಸೂರು ಸುತ್ತಮುತ್ತ ನೆಲೆಸಿರುವ ಮೇದರು ಇವರಲ್ಲಿದೆ ಪ್ರದೇಶಾನುಸಾರವಾಗಿ ಇವರಲ್ಲಿ ಉಪಪಂಗಡಗಳು ಸಾಕಷ್ಟಿವೆ."[೧೮] (ಕರ್ನಾಟಕ ಬುಡಕಟ್ಟುಗಳು ೨೦೦೦:೧)

**ಮೇದರ ಪೌರಾಣಿಕ ಹಿನ್ನೆಲೆ**

ಪುರಾಣ ಒಂದು: "ಮೇದರು ತಾವು ಮಹೇಂದ್ರ ಪರ್ವತದಿಂದ ಬಂದ ಶಿವಗಣದ ವಂಶಜರು ಎನ್ನುವುದಕ್ಕೆ ಸೃಷ್ಟಿ ಪುರಾಣ ಹೀಗಿದೆ. ಶಿವನ ಮಾವನಾದ ದಕ್ಷನು, ಒಂದು ಮಹಾಯಜ್ಞವನ್ನು ಮಾಡಲು ಸಕಲ ಸಿದ್ದತೆಯನ್ನು ಮಾಡಿಕೊಂಡಿದ್ದನು. ದಕ್ಷನು ತನ್ನ ಯಜ್ಞಕ್ಕೆ ಅಳಿಯನಾದ ಶಿವನನ್ನು ಕರೆಯಲು ಕೈಲಾಸಕ್ಕೆ ಬಂದನು. ಅಲ್ಲಿ ಶಿವನನ್ನು ಕಾಣುತ್ತಲೇ ಶಿವನಿಗೆ ಎರಡು ಕೈಗಳನ್ನು ಎತ್ತಿ ನಮಸ್ಕರಿಸಿದನು. ಧ್ಯಾನಮಗ್ನನಾದ ಶಿವನು ಇದನ್ನು ಗಮನಿಸಲಿಲ್ಲ. ನಾನು ಮಾಡಿದ ನಮಸ್ಕಾರಕ್ಕೆ ಪ್ರತಿ ನಮಸ್ಕಾರವನ್ನು ಶಿವನು ಮಾಡಲಿಲ್ಲ ಎಂದು ಮಹಾಕೋಪದಿಂದ ದಕ್ಷನು ತನ್ನ ತಾಣಕ್ಕೆ ಮರಳಿದ. ನಾನು ಮಾಡುವ ಈ ಮಹಾಯಜ್ಞಕ್ಕೆ ಶಿವನಾಗಲೀ, ಅವನ ಸತಿಸುತರಾಗಲಿ, ಯಾರೇ ಬಂದರೂ ಅವರನ್ನು ಸತ್ಕರಿಸಿ ಗೌರವ ಕೊಡಬೇಡಿರಿ ಎಂದು ಕಟ್ಟಪ್ಪಣೆ ವಿಧಿಸಿದ ಕೆಲವೇ ದಿನಗಳಲ್ಲಿ ದಕ್ಷನ ಮಹಾಯಜ್ಞ ಆರಂಭವಾಯಿತು.

ಅತ್ತ ಕೈಲಾಸದಲ್ಲಿ ಪಾರ್ವತಿಯು ಶಿವನು ಬೇಡವೆಂದು ಎಷ್ಟು ಹೇಳಿದರೂ ಲೆಕ್ಕಿಸದೆ ಗಣಪತಿಯೊಡನೆ ತಂದೆಯ ಮನೆಗೆ ಬರುತ್ತಾಳೆ. ಯಜ್ಞ ಮಂಟಪದಲ್ಲಿ ಪಾರ್ವತಿಯನ್ನು ಯಾರು ಸತ್ಕರಿಸಿ ಗೌರವಿಸಲಿಲ್ಲ. ಈ ಅಪಮಾನವನ್ನು ಸಹಿಸದೆ ಪಾರ್ವತಿಯು ದುಃಖದಿಂದ ಕಣ್ಣೀರಿಟ್ಟಳು. ಜಗಜ್ಜನನಿಯಾದ ಪಾರ್ವತಿಯು ಭೂಮಿಯ ಕಂದಕದಲ್ಲಿ ಹಾರಿ ಆತ್ಮಾಹುತಿ ಮಾಡಿಕೊಳ್ಳುತ್ತಾಳೆ.

ಮುಂದೊಂದು ಕಾಲದಲ್ಲಿ ಪಾರ್ವತಿಯು ಹಿಮವಂತ ರಾಜನ ಮಗಳಾಗಿ ಜನಿಸಿದಳು. ಆಗ ಶಿವನು ಅಲ್ಲಿಗೆ ಬಂದು ಪಾರ್ವತಿಯ ಜನ್ಮವೃತ್ತಾಂತವನ್ನು ತಿಳಿದು ಪುನಃ ಅವಳನ್ನೇ ಮದುವೆಯಾಗುತ್ತಾನೆ. ಹೀಗೆಯೇ, ಒಂದು ದಿವಸ ಶಿವ ಪಾರ್ವತಿಯರು ಆನಂದದಿಂದ

ಕುಳಿತಿದ್ದರು. ಪಾರ್ವತಿಯು ಶಿವನನ್ನು ತಮ್ಮ ಗಿರಿಜಾ ಕಲ್ಯಾಣದ ವೃತ್ತಾಂತಕ್ಕೆ ಕಾರಣ ಕೇಳಿದಳು. ಆಗ ಶಿವನು ನೀನು ನನ್ನ ಆಜ್ಞೆಯನ್ನು ಮೀರಿ ಮಾವನ ಮನೆಗೆ ಹೋದೆ, ನಿನ್ನ ತವರು ಮನೆಯ ಅತಿಯಾದ ವ್ಯಾಮೋಹವೇ ಇದಕ್ಕೆ ಕಾಣವೆಂದು ಹೇಳಿದನು. ನಿನಗಿರುವ ತವರಿನ ಮೇಲಿನ ವ್ಯಾಮೋಹ ಹೊರಟು ಹೋಗಲು ವ್ರತವನ್ನು ಮಾಡಿ ಮುತ್ತೈದೆಯರಿಗೆ ಮೊರದಲ್ಲಿ ಬಾಗಿನ ಕೊಡಬೇಕೆಂದು ತಿಳಿಸಿದ, ಅದಕ್ಕೆ ಪಾರ್ವತಿಯು ವ್ರತವನ್ನು ಮಾಡಿ ಬಾಗಿನ ಕೊಡಲು ಚಿನ್ನದ ಮೊರಗಳನ್ನು ಮಾಡಿಸುತ್ತಾಳೆ. ಚಿನ್ನದ ಮೊರಕ್ಕೆ ಮೊಲೆ, ಹೆಣಿಗೆ, ಮತ್ತು ಕಟ್ಟು ಇರುವುದಿಲ್ಲ. ಆದ್ದರಿಂದ ಅವು ಬಾಗಿನ ಕೊಡಲು ಶ್ರೇಷ್ಠವಲ್ಲ. ಎಂದು ನಾರದ ಸೂಚಿಸುತ್ತಾನೆ. ಆಗ ನಾರದನ ಸಲಹೆಯಂತೆ ಶಿವನಲ್ಲಿ ಮೊರೆ ಹೊಕ್ಕಳು. ಶಿವನು ತನ್ನ ಕೊರಳಿನ ಶಂಕರಾಭರಣವನ್ನು ತೆಗೆದು ಭೂಲೋಕಕ್ಕೆ ಎಸೆದನು. ಭೂಮಿಯು ಕಡೆ ತಲೆ ಕೆಳಗಾಗಿ ಬೆಳೆಯಿತು. ಶಿವನ ಆಜ್ಞೆಯಂತೆ ಗಣಪತಿಯು ಗಣಸಮೂಹದೊಂದಿಗೆ ಭೂಲೋಕದ ಮಹೇಂಧ್ರ ಪರ್ವತಕ್ಕೆ ಮಾನವ ರೂಪದಲ್ಲಿ ಆಗಮಿಸಿದನು. ಅಲ್ಲಿ ಗಣಗಳ ಜೊತೆಗೂಡಿ ಶಿವನು ಕೊಟ್ಟ ತ್ರಿಶೂಲ ಮತ್ತು ಗದೆಗಳನ್ನು ಕತ್ತಿ, ಕೊರಡು, ಒಂಬುಗಳನ್ನಾಗಿ ಬಳಸಿ ಬಿದಿರಿನಿಂದ ಹೆಣಿಗೆ ಮತ್ತು ಕಟ್ಟು ಹಾಕಿ, ಮೊಲೆ ತಿರುವಿದ ಮೊರ ಹೆಣೆದು ಪಾರ್ವತಿಗೆ ಕೊಡುತ್ತಾರೆ. ಗಣಪತಿಯು ಗಣ ಸಮೂಹದೊಂದಿಗೆ ಬಿದಿರಿನ ಕಸುಬಾದ ಚಪಕಾರಕ ವೃತ್ತಿಯಲ್ಲಿಯೇ ಮುಂದುವರೆಯುತ್ತಾರೆ. ಮುಂದೆ ಗಣ ಸಮೂಹ ಗಂಧರ್ವ ಕನ್ಯೆಯರನ್ನು ಮದುವೆಯಾಗಿ ಮಕ್ಕಳನ್ನು ಸಹ ಪಡೆಯುತ್ತಾರೆ.

ಕೆಲವು ಸಂವತ್ಸರಗಳ ನಂತರ ಶಿವನು ತನ್ನ ಗಣ ಸಮೂಹಗಳನ್ನು ಹಿಂತಿರುಗಿ ಕೈಲಾಸಕ್ಕೆ ಕರೆಸಿಕೊಳ್ಳುತ್ತಾನೆ. ಈ ಗಣ ಸಮೂಹ ತಮ್ಮ ಸತಿಸುತರನ್ನು ಜೊತೆಯಲ್ಲಿ ಕೈಲಾಸಕ್ಕೆ ಕರೆದುಕೊಂಡು ಹೋಗಬಾದರು. ನೀವುಗಳು ಇಲ್ಲಿಯೇ ಇದ್ದು ಈ ಚಪಕಾರಕ ವೃತ್ತಿಯನ್ನು ಕುಲಕಸುಬಾಗಿಸಿಕೊಂಡು ಜೀವನ ಸಾಗಿಸಿರಿ ಎಂದು ಗಣ ಸಮೂಹವು ತಮ್ಮ ಸತಿಸುತರಿಗೆ ಹೇಳಿದರು. ಶಿವನ ವಂಶಜರಾದ ನೀವು ಮಹೇಂದ್ರಚಲದ ಮಹೇಂದ್ರರು. ಭೂಮಿಯ ಮೇಲಿನ ಬಿದಿರು ನಿಮ್ಮ ಸ್ವತ್ತು. ನಿಮ್ಮ ಕುಶಲತೆಯಿಂದ ತಯಾರಿಸುವ ಬಿದಿರಿನ ವಸ್ತುಗಳು ಪೂಜಾ ಕಾರ್ಯ ಮತ್ತು ಅನೇಕ ಮಂಗಳ ಕಾರ್ಯಗಳಲ್ಲಿ ಬಳಸುವಂತಾಗಲಿ ಎಂದು ಹೇಳಿ ಸಮಸ್ತ ಗಣ ಸಮೂಹವು ಕೈಲಾಸಕ್ಕೆ ತೆರಳಿತು."[೧೯]

ಅಂತೆಯೇ ಮೇದರು ಭೂಮಿಯ ಮೇಲಿನ ಬಿದಿರು ನಮ್ಮ ಸ್ವತ್ತು ಮತ್ತು ನಾವು ಶಿವನ ವಂಶಜರು ಎಂದು ಹೇಳುತ್ತಾರೆ. ಈ ಪುರಾಣದಲ್ಲಿ ಈ ಸಮುದಾಯದ ಸಾಮಾಜಿಕ ಸಂಬಂಧಗಳು, ಸಾಮಾಜಿಕ ಸಂಬಂಧಗಳಲ್ಲಿ ಏರುಪೇರಾದರೆ ಉಂಟಾಗುವ ಆವಾಂತರಗಳು, ತವರಿನ ಬಗ್ಗೆ

ಸ್ತ್ರೀಯರು ಹೊಂದಿರುವ ವ್ಯಾಮೋಹ, ಮುತ್ತೈದೆತನದ ಬಗ್ಗೆ, ಪುನರ್ಜನ್ಮದ ಕಲ್ಪನೆಯನ್ನು ಸಾಮಾಜಿಕ ಹಿನ್ನೆಲೆಯಿಂದ ನೋಡಿದಾಗ ತಿಳಿಯುತ್ತದೆ. ಇವರು ಶಿವ ವಂಶಜರು. ಇವರ ಮೂಲ ಮಹೇಂದ್ರಾಚಲ ಪರ್ವತವಾಗಿದ್ದು, ಇವರ ಮೂಲ ಕಸುಬು ಬಿದಿರಿನ ಕೆಲಸವಾಗಿದೆ. ಈ ಕೆಲಸವು ಸ್ವತಃ ಶಿವನಿಂದ ಪಡೆದ ವರವಾಗಿದೆ ಎಂಬುದು ಚಾರಿತ್ರಿಕ ಮತ್ತು ವೃತ್ತಿಯ ಹಿನ್ನೆಲೆಯಿಂದ ನೋಡಿದಾಗ ತಿಳಿಯುತ್ತವೆ.

ಪುರಾಣ ಎರಡು: "ಕುಲಕಸುಬಾದ ಬಿದಿರಿನ ಕೆಲಸವನ್ನು ಆಶ್ರಮಿಸಿದ ಮೇದರು ಎಂದೂ ಶ್ರೀಮಂತರಾಗುವುದಿಲ್ಲ. ಆದರೆ, ಇವರು ಕುಲಕಸುಬನ್ನು ನಂಬಿದರೆ, ಊಟ ಮತ್ತು ಬಟ್ಟೆಗೆ ಕೊರತೆಯಾಗುವುದಿಲ್ಲ ಎಂದು ಇವರ ನಂಬಿಕೆ, ಈ ಕುರಿತಾದ ಒಂದು ಕಥೆ ಹೀಗಿದೆ. ಬಾಗಿನ ಕೊಡಲು ಪಾರ್ವತಿಗೆ ಬೇಕಾದ ಬಿದಿರಿನ ಮೊರ ಹೆಣೆದು ಕೊಡಲು ಗಣ ಸಮೂಹ ಮಹೇಂದ್ರ ಪರ್ವತಕ್ಕೆ ಬರುತ್ತಾರೆ. ಬಂದ ಕೆಲಸ ಮುಗಿದ ನಂತರ ಇವರು ಬಿದಿರಿನ ಕೆಲಸವನ್ನು ಕಸುಬಾಗಿಸಿಕೊಂಡು ಭೂಮಿಯ ಮೇಲೆ ಸುಖವಾಗಿದ್ದರು. ಇವರಲ್ಲಿ ಇನ್ನೂ ಕೆಲವರು, ಮದ್ಯ, ಮಾಂಸ ಭಕ್ಷಿಸುತ್ತಾ ಅತಿ ಸುಖಿಗಳಾಗಿದ್ದರು. ಕೆಲವು ವರ್ಷಗಳ ನಂತರ ಇವರನ್ನು ನೋಡಿಕೊಂಡು ಹೋಗಲು ಶಿವನು ಮಾರುವೇಷದಲ್ಲಿ ಭೂಲೋಕಕ್ಕೆ ಬರುತ್ತಾನೆ. ಜಂಗಮ ವೇಷಧಾರಿಯಾದ ಶಿವನನ್ನು ಮೇದರು ಯಾರು ಗುರುತಿಸುವುದಿಲ್ಲ. ಸೋಜಿಗನಾದ ಶಿವನು, ನಾನು ನಿಮ್ಮ ಶಿವ ಬಂದಿದ್ದೇನೆ ಕೈಲಾಸಕ್ಕೆ ಹೋಗೋಣ ನಡೆಯಿರಿ ಎಂದನು. ಅವರಲ್ಲಿ ಕೆಲವರು ಶಿವನ ಕರೆಗೆ ಹೋಗೊಟ್ಟು ಹೊರಟು ನಿಂತರು. ಇಲ್ಲಿಯೇ ನಾವು ಸುಖವಾಗಿದ್ದೇವೆ. ಆದ್ದರಿಂದ ನಾವು ಕೈಲಾಸಕ್ಕೆ ಬರುವುದಿಲ್ಲ ಎಂದು ಕೆಲವರು ಹೇಳಿದರು. ಈ ಮಾತು ಕೇಳಿ ಶಿವನಿಗೆ ಕೋಪ ಬರುತ್ತದೆ. ನನ್ನಂತೆಯೇ ಸಾತ್ವಿಕರಾಗಿದ್ದು, ನನ್ನ ಹಿಂದೆ ಕೈಲಾಸಕ್ಕೆ ಹೊರಟು ನಿಂತ ನೀವು ಮಾತ್ರ ನನ್ನ ಮಕ್ಕಳು, ಮದ್ಯ, ಮಾಂಸ ಕುಡಿದು ತಿಂದು ತಾಮಸಿಗರಾದ ಅವರು ಗೌರಿಯ ಮಕ್ಕಳು, ಅವರಿಗೆ ಈ ಭೂಮಿಯ ಮೇಲೆ ಕುಲಕಸುಬು ಒಂದೇ ಗತಿಯಾಗಲಿ, ಅವರಿಗೆ ಹಿಡಿಗಾಳು ಮಾತ್ರ ದೊರೆಯುವಂತಾಗಲಿ ಎಂದು ಶಪಿಸಿದನು. ಆದ್ದರಿಂದ ಕುಲಕಸುಬನ್ನು ಆಶ್ರಯಿಸಿದ ಮೇದರು ಶ್ರೀಮಂತರಾಗುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ.

ಪುರಾಣ ಮೂರು: "ಒಟ್ಟು ಶಿವ ಪಾರ್ವತಿಯರು ನಂದಿಯ ಮೇಲೆ ಭೂಮಾರ್ಗವಾಗಿ ಹೊರಟಿದ್ದರು. ಆಗ ಭೂಲೋಕದಲ್ಲಿ ಭೀಕರ ಕ್ಷಾಮ ಬಂದಿತ್ತು. ಮೇದರಿಗೆ ಕಸುಬು ಮಾಡಲು ಬಿದಿರು ಸಿಗದಾಯಿತು. ಆಹಾರದ ಅಭಾವದಿಂದ ಎಳೆಬಿದಿರು ತಂದು ಬೇಯಿಸಿ ತಿನ್ನುತ್ತಿರುತ್ತಾರೆ. ನನ್ನ ಮಕ್ಕಳಾದ ಗೌರಿಗರಿಗೆ ಈ ಗತಿ ಬರಬಾರದಿತ್ತೆಂದು ಪಾರ್ವತಿಯು ದುಃಖಿಸುತ್ತಾಳೆ. ಇವರಿಗೆ ಏನಾದರೂ ದಾರಿ ತೋರಿಸಬೇಕೆಂದು ಶಿವನಲ್ಲಿ ಮೊರೆ ಇಡುತ್ತಾಳೆ. ಆಗ ಶಿವನು

ಪಾರ್ವತಿಯೊಂದಿಗೆ ಮೇದರ ಮುಂದೆ ಪ್ರತ್ಯಕ್ಷನಾದ. ಮಕ್ಕಳೇ, ನಿಮಗೆ ಏನು ಬೇಕು ಕೇಳಿ ನಿಮಗೊಂದು ವರ ಕೊಡುತ್ತೇನೆ ಎಂದನು. ಆಗ ಮೇದರು ದೇವಾ, ನಮಗೆ ಕಸುಬು ಮಾಡಲು ಹಸಿ ಬಿದಿರು ಸಿಗದಾಗಿದೆ. ಹೊಟ್ಟೆಗೆ ಒಂದು ಗುಟುಕು ಗಂಜಿಗೂ ಗತಿಯಿಲ್ಲದಾಗಿದೆ. ಅವನ್ನು ಕರುಣಿಸಿದರೆ ಸಾಕು ಎಂದು ಬೇಡಿಕೊಂಡರು. ಆಗ ಶಿವನು ತಥಾಸ್ತು ಇನ್ನು ಮುಂದೆ ಈ ಭೂಮಿಯ ಮೇಲೆ ನಿಮಗೆ ಹಸಿಬಿದಿರು ಮತ್ತು ಬಿಸಿ ಗಂಜಿಗೆ ಕೊರತೆಯಾಗದಂತೆ ವರ ಕೊಟ್ಟಿರುವೆ ಎಂದು ಹೇಳಿ ಶಿವಪಾರ್ವತಿಯರು ಅದೃಶ್ಯರಾದರು."[೨೦]

ಈ ಮೇಲಿನ ಪುರಾಣದಿಂದ ಮೇದರು ಶಿವಪಾರ್ವತಿಯರ ಮಕ್ಕಳೆಂದು, ಶಿವ ಪಾರ್ವತಿಯರ ಕೊಟ್ಟಿರುವ ವರದಿಂದ ತಮ್ಮ ಕುಲಕಸುಬು ಮಾಡಿದರೆ ಊಟ ಮತ್ತು ಬಟ್ಟೆಗೆ ತೊಂದರೆಯಾಗುವುದಿಲ್ಲ ಯಾವಾಗಲೂ ಬಿದಿರು ಸಿಗುತ್ತದೆ ಎಂಬುದು ತಿಳಿಯುತ್ತದೆ. ಅಂದರೆ ಬರಗಾಲದಲ್ಲಿಯೂ ಕೂಡ ಮೇದರಿಗೆ ಹೊಟ್ಟೆಗೆ ಕೊರತೆಯಾಗುವುದಿಲ್ಲವೆಂದು ತಿಳಿಯುತ್ತದೆ.

ಪುರಾಣ ನಾಲ್ಕು: "ಮೇದರ ಮೂಲ ಕುರಿತಂತೆ ಒಂದು ಪೌರಾಣಿಕ ಕಥೆಯ ಹಿನ್ನೆಲೆ ಹೀಗಿದೆ. ಮಹಾಭಾರತದಲ್ಲಿ ಬರುವ ನೀತಿಶಾಸ್ತ್ರ ಪ್ರವೀಣನಾದ ವಿದುರನ ಮೂಲದವರು ಮೇದರು, ವಿದುರ ಎಂದರೆ ಬಿದಿರು ಎಂದು ಮೇದರು ಹೇಳುತ್ತಾರೆ. ಬಿದಿರು ಮೇದರ ವೃತ್ತಿಯ ಮುಖ್ಯ ಕಚ್ಚಾವಸ್ತುವಾಗಿದೆ. ವಿಧುರ ಮತ್ತು ಬಿದಿರು ಪದಗಳು ಧ್ವನಿ ಸ್ವಾಮ್ಯವನ್ನು ಹೊಂದಿದ್ದು, ಹೋಲಿಕೆಯನ್ನು ಕಾಣುತ್ತೇವೆ. ಆದ್ದರಿಂದಲೇ ಮೇದರು ತಾವು ವಿದುರನ ವಂಶಕ್ಕೆ ಸೇರಿದವರೆಂದು ಹೇಳುತ್ತಾರೆ. ಆದರೆ, ಇದಕ್ಕೆ ಅವಲೋಕಿಸಿದ ಯಾವ ಗ್ರಂಥದಲ್ಲಿಯೂ ಹೆಚ್ಚಿನ ವಿವರಣೆ ಕಂಡುಬರುವುದಿಲ್ಲ."[೨೧]

"ಪುರಾಣಗಳ ಪ್ರಧಾನ ಉದ್ದೇಶವೆಂದರೆ ಪ್ರಕೃತಿಯಲ್ಲೋ ಸಮಾಜದಲ್ಲೋ, ಸ್ಥಾಪಿತವಾದ ಕಟ್ಟು ಕಟ್ಟಳೆಗಳನ್ನು ಸ್ಥಿರಗೊಳಿಸುವುದು, ನಂಬಿಕೆಗಳನ್ನು ಧೃಡಪಡಿಸುವುದು, ದೇವ ದೇವತೆಗಳ ಉಪಾಸನೆಯ ಸಮರ್ಪಕತೆ, ಸಾರ್ಥಕತೆಯನ್ನು ಸಮರ್ಥಿಸುವುದು ಹಾಗೂ ಸಾಂಪ್ರದಾಯಿಕ ವ್ಯವಸ್ಥೆ ವರ್ತನೆಗಳನ್ನು ಅಲೌಕೀಕ ಆದರ್ಶ ಮತ್ತು ದಂಡನೆಗಳ ಮೂಲಕ ಸುಗಮವಾಗಿ ಕಾಪಾಡುವುದು."[೨೨] (ದೈವಜ್ಞ:೨೦೦೦:೨)

ಈ ಮೇಲಿನ ಸುರಪುರ ತಾಲೂಕಿನ ಚಾರಿತ್ರಿಕ ಮತ್ತು ಭೌಗೋಳಿಕ ಹಿನ್ನೆಲೆಯನ್ನು ನೋಡಿದಾಗ ಈ ಪ್ರದೇಶದಲ್ಲಿ ಆದಿಮಾನವನು ಈ ಪ್ರದೇಶದಲ್ಲಿ ನೆಲೆಸಿದ್ದನು ಎಂಬುದು ಪ್ರಾಗೈತಿಹಾಸದಿಂದ ತಿಳಿಯುತ್ತದೆ. ಕಾರಣ ಆದಿಯ ಹಂತದಿಂದ ಆಧುನಿಕ ಹಂತವನ್ನು ತಲುಪಿರುವುದರಿಂದ ಬುಡಕಟ್ಟುಗಳೇ ಈ ಪ್ರದೇಶದ ಮೂಲಿಗರು ಎಂದು ಗೊತ್ತಾಗುತ್ತದೆ. ಬೇಡ ಮತ್ತು ಮೇದ ಸಮುದಾಯಗಳು ಪ್ರಸ್ತುತವಾಗಿ ಬುಡಕಟ್ಟು ಸಮುದಾಯಗಳಾಗಿವೆ.

ಆದರೆ ಇವುಗಳು ಇಂದು ತಮ್ಮ ಚಹರೆಯನ್ನು ಸಂಸ್ಕೃತೀಕರಣ, ಪಾಶ್ಚಾತೀಕರಣದಿಂದ ಕಳೆದುಕೊಂಡು ಜಾತಿಗಳಾಗಿ ಮಾರ್ಪಾಡಾಗುತ್ತಿವೆ. ಇವುಗಳ ಪೌರಾಣಿಕ, ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ನೋಡಿದಾಗ ಈ ಸಮುದಾಯಗಳು ಬುಡಕಟ್ಟು ಸಮುದಾಯಗಳಾಗಿದ್ದವು ಎಂಬುದು ಸ್ಪಷ್ಟವಾಗುವುದು. ಅಂದರೆ ಬೇಡರ ಮೂಲ ಕಸಬು ಬೇಟೆಯಾದರೆ, ಮೇದರ ಮೂಲ ಕಸುಬು ಬಿದಿರಿನ ಕೆಲಸವಾಗಿದೆ. ಈ ಎರಡು ಸಮುದಾಯಗಳು ಶಿವನ ಆರಾಧಕರಾಗಿದ್ದರು ಎಂಬುದು ಪೌರಾಣಿಕ ಹಿನ್ನೆಲೆಯಿಂದ ತಿಳಿಯುತ್ತದೆ. ಈ ಸಮುದಾಯಗಳು ಮೂಲದಲ್ಲಿ ಶೈವ ಪಂಥಿಯರಾಗಿದ್ದರು. ಬುಡಕಟ್ಟುಗಳು ಶಿವನನ್ನು ಆರಾಧಿಸುವ ಹಿನ್ನೆಲೆಯಿಂದ ಶಿವನು ಬುಡಕಟ್ಟು ದೈವವಾಗಿದ್ದಾನೆ. ಏಕೆಂದರೆ ಶಿವನ ಸ್ವರೂಪ, ವೇಷ ಭೂಷಣ, ಅವನ ನೆಲೆಯಿಂದ ಸ್ಪಷ್ಟವಾಗುತ್ತದೆ.

ಅಲ್ಲದೆ ಬೇಡರ ಮೂಲಪುರುಷ ವಾಲ್ಮೀಕಿಯಾಗಿರುವನು. ಇವನು ಮೊದಲು ಕಾಡಿನಲ್ಲಿ ಬೇಟೆಯಾಡುವ ಕಾಡುಮನುಷ್ಯನಾಗಿದ್ದನು. ಋಷಿಮುನಿಗಳ ಆಶೀರ್ವಾದದಿಂದ ಜ್ಞಾನೋದಯವಾಗಿ ಋಷಿಮುನಿಯಾದನು. ಅಲ್ಲದೆ ಬೇಡರ ಕಣ್ಣಪ್ಪನು ಬೇಟೆಯಾಡಿ ಬೇಟೆಯಿಂದಲೇ ಶಿವನಿಗೆ ನೈವೇದ್ಯ ಮಾಡಿ ಶಿವನ ಭಕ್ತನಾದನು. ಆದರಿಂದ ಈ ಇಬ್ಬರು ಬೇಡ ಸಮುದಾಯದ ಮೂಲ ಪುರುಷರು ಮತ್ತು ಸಾಂಸ್ಕೃತಿಕ ನಾಯಕರಾಗಿದ್ದಾರೆ.

ಮೇದರ ಹುಟ್ಟಿಗೆ ಗಣಸಮೂಹಗಳೇ ಕಾರಣವಾಗಿವೆ. ಶಿವ ಪಾರ್ವತಿಯ ವಂಶಜರೇ ಮೇದರಾಗಿದ್ದು, ಶಿವಪಾರ್ವತಿಯರು ಬಿದಿರಿನ ಕೆಲಸವನ್ನು ವರವಾಗಿ ಕೊಟ್ಟಿರುವುದರಿಂದ ಇವರು ಈ ಕೆಲಸ ಮಾಡುವುದರಲ್ಲಿ ಸಂತೃಪ್ತಿಯಿದೆ ಎಂದು ತಿಳಿಯುತ್ತದೆ. ಮೇದಾರ ಕೇತಯ್ಯ ಈ ವಂಶದ ಸಾಂಸ್ಕೃತಿಕ ನಾಯಕನಾಗಿದ್ದಾನೆ.

ಒಟ್ಟಾರೆಯಾಗಿ ಈ ಎರಡು ಸಮುದಾಯಗಳ ಆಚರಣೆ, ಸಂಪ್ರದಾಯ, ನಂಬಿಕೆ, ಮೌಲ್ಯಗಳು, ದೈವರಾಧನೆಗಳ, ಕುಲಕಸುಬಗಳ ಮೂಲ, ಈ ಸಮುದಾಯಗಳ ಪುರಾಣಗಳು, ಹಾಗೂ ಚರಿತ್ರೆ ಹೊಂದಿರುವುದು ಸ್ಪಷ್ಟ. ಯಾವುದೇ ಸಮುದಾಯದ ಆಚರಣೆ, ಸಂಪ್ರದಾಯ, ನಂಬಿಕೆ, ಮೌಲ್ಯಗಳನ್ನು, ದೈವರಾಧನೆಯನ್ನು ತಿಳಿಯಬೇಕಾದರೆ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆ ಅವಶ್ಯಕವಾಗಿದೆ. ಇಂತಹ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆಯಿಂದ ಸಮುದಾಯಗಳ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ತಿಳಿಯಬಹುದು. ಅಂದರೆ ಪುರಾಣ ಮತ್ತು ಚರಿತ್ರೆ ಸಮುದಾಯಗಳ ಈ ಅಂಶಗಳ ಮೇಲೆ ಪ್ರಭಾವ ಬೀರುತ್ತವೆ. ಆದ್ದರಿಂದ ಬೇಡ ಮತ್ತು ಮೇದ ಸಮುದಾಯದ ಪೌರಾಣಿಕ ಮತ್ತು ಚಾರಿತ್ರಿಕ ಹಿನ್ನೆಲೆಯಿಂದ ಅವರ ಸಾಮಾಜಿಕ ಆರ್ಥಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ

ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ತಿಳಿಯುಬಹುದು ಮತ್ತು ಪ್ರಸ್ತುತ ಸಂದರ್ಭದಲ್ಲಿ ಈ ಅಂಶಗಳು ಬದಲಾಗಿವೆಯೇ? ಬದಲಾವಣೆಯ ಸ್ವರೂಪ ಮತ್ತು ಬದಲಾವಣೆಗೆ ಕಾರಣಗಳನ್ನು ತಿಳಿಯುಬಹುದು. ಈ ಬದಲಾವಣೆಯು ಸ್ವರೂಪ ಮತ್ತು ಬದಲಾವಣೆಗೆ ಕಾರಣಗಳನ್ನು ಮುಂದಿನ ಅಧ್ಯಾಯುಗಳಲ್ಲಿ ಚರ್ಚಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಡಾ. ವಿರೂಪಾಕ್ಷಿ ಪೂಜಾರಹಳ್ಳಿ ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯು ಹಂಪಿ, ೨೦೦೮ ಪು.ಸಂ. ೬

೨. ಅದೇ, ಪು.ಸಂ. ೬

೩. ಭಾಸ್ಕರರಾವ್ ಮುಡಬೂಳ, ಮರೆತು ಹೋದ ಸುರಪುರ ಇತಿಹಾಸ, ಎಸ್.ಜಿ. ಪ್ರೊಸೆಸ್ ಬೆಂಗಳೂರು, ೨೦೦೧ ಪು.ಸಂ. ೧೪.೧೫

೪. ಡಾ. ಮಂಜುನಾಥ ಬೇವಿನಕಟ್ಟಿ, ವ್ಯಾಧ ಚರಿತೆ, ಬೇಡ ಕುಲಮೂಲದ ಕಥನಗಳು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯು ಹಂಪಿ.

೫. ಸಂ.ಶುಭಾ, ಸುರಪುರ ವಿಮೋಚನಾ ಹೋರಾಟ, ಕನ್ನಡ ವಿಶ್ವವಿದ್ಯಲಾಯು ಹಂಪಿ, ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ ಅಪ್ರಕಟಿತ ಪ್ರಬಂಧ ೨೦೦೬ ಪು.ಸಂ.೧೯

೬. ಅದೇ, ಪು.ಸಂ.೨೧.

೭. ಭಾಸ್ಕರರಾವ್ ಮುಡಬೂಳ, ಮರೆತು ಹೋದ ಸುರಪುರ ಇತಿಹಾಸ, ಎಸ್.ಜಿ. ಪ್ರೊಸೇಸ್ ಬೆಂಗಳೂರು ೨೦೦೧ ಪು.ಸಂ. ೫೧. ೫೨

೮. ಸಂ. ಶುಭಾ, ಸುರಪುರ ವಿಮೋಚನಾ ಹೋರಾಟ, ಕನ್ನಡ ವಿಶ್ವ ವಿದ್ಯಾಲಯು ಹಂಪಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ ಅಪ್ರಕಟಿತ ಪ್ರಬಂಧ ೨೦೦೬, ಪುಟ-೨೧

೯. ಅದೇ ಪು.ಸಂ.-೨೧

೧೦. ರೇವಣಸಿದ್ದಯ್ಯ, ಆರ್. ಶೋರಾಪುರ ತಾಲೂಕ ದರ್ಶನ, ಐ.ಬಿ. ಎಚ್ ಪ್ರಕಾಶನ ಬೆಂಗಳೂರು ಪು.ಸಂ. ೪

೧೧. ಸಂ. ಶುಭಾ, ಸುರಪುರ ವಿಮೋಚನಾ ಹೋರಾಟ ಕನ್ನಡ ವಿಶ್ವವಿದ್ಯಾಲಯು ಹಂಪಿ, ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ ಅಪ್ರಕಟಿತ ಪ್ರಬಂಧ, ೨೦೦೬, ಪು-೨.

೧೭. ಪ್ರೊ. ಲಕ್ಕಪ್ಪಗೌಡ ಎಚ್.ಜಿ.ಲೇಖನ :ಡಾ॥ ಪಾಂಡುರಂಗ ಡಿ.ಆರ್. ಕರ್ನಾಟಕ ಜಾನಪದ ಮತ್ತು ಯುಕ್ಷಗಾನ ಅಕಾಡೆಮಿ, ಬೆಂಗಳೂರು ೨೦೦೦ ಪು.ಸಂ. ೨.

೧೮. ಸಂ. ಪನ್ನಂಗಧರ.ಕೆ, ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಾದರಪಡಿಸಿದ ಅಪ್ರಕಟಿತ ಪ್ರಬಂಧ ೨೦೦೪, ಪ್ರ.ಸಂ. ೨೫-೨೬.

೧೯. ಅದೇ ಪ್ರ.ಸಂ. ೨೬.

೨೦. ಅದೇ ಪ್ರ.ಸಂ. ೨೭,೨೮

೨೧. ಅದೇ ಪ್ರ.ಸಂ. ೨೪

೨೨. ಗಂಗಾಧರ ದೈವಜ್ಞ : ಬುಡಕಟ್ಟು ಸಮಾಜ, ಹುಟ್ಟುಸಾವಿನ ನಡುವೆ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦ ಪ್ರ.ಸಂ. ೨

# ಬುಡಕಟ್ಟುಗಳ ಸಾಮಾಜಿಕ ಸ್ಥಿತ್ಯಂತರಗಳು

"ಯಾವುದೇ ಜೀವಂತ ಸಮಾಜಕ್ಕೆ ಸಹಜವಾಗಿಯೇ ಚಲನಶೀಲತೆ ಎಂಬುದು ಅಂತರ್ಗತವಾಗಿರುತ್ತದೆ. ಚಲನಶೀಲತೆ ಜೀವಂತಿಕೆಯ ಸಹಜಗುಣ"[1] ಜೀವಂತ ಸಮಾಜವು ಸ್ಥಿರವಾಗಿದದ್ದು, ಜಡವಾಗಿದ್ದದು. ಮತ್ತು ಶಾಶ್ವತ ಸ್ವರೂಪವನ್ನು ಹೊಂದಿರುವುದು ಕಂಡಿಲ್ಲ. ಕಾರಣ ಪರಿವರ್ತನೆಯು ಸರ್ವವ್ಯಾಪಕವಾದುದು ಸರ್ವಕಾಲಿಕವಾದುದು ಎಂಬುದು ಸ್ಪಷ್ಟವಾಗುವುದು ಆದ್ದರಿಂದ ಸಮುದಾಯಗಳು ಆದಿಮ ಹಂತದಿಂದ ಇಂದಿನ ಆಧುನಿಕ ಮಾನವ ಚಿಂತನೆ ಕಾಲಘಟ್ಟದವರೆಗೆ ತಮ್ಮ ರೂಪವನ್ನು ಬದಲಿಸಿಕೊಂಡಿವೆ. ಮಾನವ ಚಿಂತನೆಯೇ ಸಮುದಾಯಗಳ ರೂಪ ಬದಲಾವಣೆಗೆ ಕಾರಣ. ಅದಕ್ಕಾಗಿ ಆಗಷ್ಟ ಕೋಮ್ಟ್ ತಮ್ಮ ಮೂರು ಹಂತಗಳ ಸೂತ್ರದಲ್ಲಿ ಸಮಾಜಶಾಸ್ತ್ರಕ್ಕೆ ತಳಪಾಯವನ್ನಿಡುವ ಪ್ರಯತ್ನದಲ್ಲಿ ಮಾನವ ಚಿಂತನೆಯ ಮೂರು ಹಂತಗಳನ್ನು ಗುರುತಿಸಿದ್ದಾನೆ ಇವು ಸಮಾಜ ವಿಕಾಸದ ಮೂರು ಹಂತಗಳನ್ನು ಪ್ರತಿನಿಧಿಸುತ್ತವೆ. ಅಂದರೆ ದೇವಶಾಸ್ತ್ರೀಯ, ಅತಿಭೌತಿಕ, ಮತ್ತು ವೈಜ್ಞಾನಿಕ ಹಂತಗಳು ಎಂಬ ಈ ಮೂರು ಹಂತಗಳು ಅನುಕ್ರಮವಾಗಿ ಸೈನಿಕ ಸಮಾಜ, ನ್ಯಾಯ ಪ್ರಧಾನ ಸಮಾಜ, ಮತ್ತು ಕೈಗಾರಿಕಾ ಸಮಾಜವನ್ನು ಪ್ರತಿನಿಧಿಸುತ್ತವೆ. ಮತ್ತೊಬ್ಬ ಸಮಾಜಶಾಸ್ತ್ರಜ್ಞರಾದ ಹರ್ಬಟ್ ಸ್ಪೆನ್ಸರ್‌ವರು ವಿಕಾಸವಾದ ಸಿದ್ಧಾಂತವನ್ನು ಸಮಾಜಕ್ಕೂ ಅನ್ವಯಿಸಬಹುದು ಎಂದು ತಿಳಿಸುವುದರ ಜೊತೆಗೆ Theory of Social Evalution ಅನ್ನು ಪ್ರತಿಪಾದಿಸಿರುವರು ಇದರಲ್ಲಿ ಸಮಾಜವೂ ಸಹ ಜೀವಿಯಂತೆ ಹಲವಾರು ಹಂತಗಳ ಮೂಲಕ ವಿಕಾಸ ಹೊಂದುತ್ತದೆ. ಅದು ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಸಾಗುತ್ತದೆ ಎಂದು ಹೇಳಿರುವರು.

ಯಾವುದೇ ಸಮುದಾಯ ತನ್ನ ಸಂಸ್ಕೃತಿಯ ಕೋಶದ ಒಳಗೆ ಕಾಲದ ಅನಿವಾರ್ಯತೆಯ ಫಲವಾಗಿ ಏರ್ಪಡುವ ಉಬ್ಬರ ಇಳಿತಗಳನ್ನು ಸಾವಧಾನವಾಗಿ ಗಮನಿಸುತ್ತಲೆ ಇರುತ್ತವೆ. ಬದಲಾಗುವ ಕಾಲಮಾನದ ಲಯಕ್ಕೆ ಅದು ತನ್ನ ವಿಸ್ತಿರಿಸಿಕೊಳ್ಳುವ ಅಥವಾ ತನ್ನ ಸಂವೇದನೆಗಳನ್ನು ಆ ಬದಲಾದ ಲಯಕ್ಕೆ ಹೊಂದಿಸಿಕೊಳ್ಳುವ ಪ್ರಯತನ್ನು ಸಮುದಾಯ ಯಾವತ್ತು ಜೀವಂತವಾಗಿಟ್ಟುಕೊಂಡಿರುತ್ತದೆ."[2] ಇದರಿಂದ ಸಮುದಾಯಗಳ ಬದಲಾವಣೆಗೆ ಕಾಲದ ಒತ್ತಡಗಳ

ಪ್ರಭಾವಗಳು ಹೇಗೆ ಕಾರಣವಾಗಿವೆ ಎಂಬುದು ತಿಳಿಯುತ್ತವೆ. ಇಂತಹ ಕಾಲದ ಒತ್ತಡ ಮತ್ತು ಪ್ರಭಾವಗಳಿಂದ ಸಮಾಜವು ತನ್ನಷ್ಟಕ್ಕೆ ತಾನು ಸ್ಥಿತ್ಯಂತರಕ್ಕೆ ಒಳಗಾಗುತ್ತದೆ ಎಂಬುದು ಸ್ಪಷ್ಟವಾಗುವುದು.

"ಚರಿತ್ರೆಯು ತನ್ನಿಂದ ತಾನೇ ಸೃಷ್ಟಿಯಾಗುವ ಸಂಗತಿಯಲ್ಲಿ ಮನುಷ್ಯ ತನ್ನ ಒಟ್ಟಾರೆಯ ಚಲನಶೀಲತೆಯ ಮೂಲಕ ಚರಿತ್ರೆಯನ್ನು ಸೃಷ್ಟಿಸುತ್ತಾನೆ."[೨] ಅಂದರೆ ಆದಿಮಾನವನು ಆಹಾರ ಸಂಗ್ರಹಣೆಯ ಹಂತದಲ್ಲಿ ಅಲೆಮಾರಿಯಾಗಿದ್ದು, ಕಾಡಲ್ಲಿ ಸಿಗುವ ಅರಣ್ಯದ ಉತ್ಪನ್ನಗಳನ್ನು ಆಯ್ದು ಜೀವನ ಸಾಗಿಸುತ್ತಿದ್ದನು. ಇವನ ವ್ಯವಹಾರವೆಲ್ಲವು ನಿಸರ್ಗದ ಮಡಿಲಲ್ಲಿ ನಡೆಯುತ್ತಿದ್ದವು. ಈ ಹಂತದ ಮನುಷ್ಯನನ್ನು ನಿಸರ್ಗ ಮನುಷ್ಯ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಹಂತದಲ್ಲಿ ಉತ್ಪಾದನಾಶಕ್ತಿ ಮನುಷ್ಯನೆ ಆಗಿದ್ದಾನೆ. ಉತ್ಪಾದನಾ ಉಪಕರಣ ಮತ್ತು ಉತ್ಪಾದನಾ ವಿಧಾನಗಳು ಸೀಮಿತವಾಗಿದ್ದವು. ಇದರಿಂದ ಯಾವ ಮೂಲದಿಂದಲೂ ಆಹಾರ ಉತ್ಪಾದಿಸಲು ಸಾಧ್ಯವಾಗುತ್ತಿರಲಿಲ್ಲ. ಕಾರಣ ಉತ್ಪಾದಿತ ಆಹಾರ ಸಂಗ್ರಹಿಸಲ್ಪಡುತ್ತಿತು. ಆದಕ್ಕಾಗಿಯೇ ಈ ಹಂತದಲ್ಲಿ ವಿತರಣೆ ಮತ್ತು ಉತ್ಪಾದನಾ ಸಂಬಂಧಗಳು ಕಂಡುಬರುವುದಿಲ್ಲ. ಅಲ್ಲದೆ ಸಾಂಘಿಕ ಜೀವನದಿಂದ ದೂರ ಉಳಿದಿದ್ದನು. ಆಂದರೆ ಮಾನವನು ಈ ಹಂತದಲ್ಲಿ ಏಕಾಂಗಿಯಾಗಿದ್ದು, ಹಲವಾರು ತೊಂದರೆಗಳನ್ನು, ದೌರ್ಬಲ್ಯಗಳನ್ನು ಎದುರಿಸಬೇಕಾಯಿತು.

ಆಹಾರ ಸಂಗ್ರಹಣೆಯ ಹಂತದಲ್ಲಿ ಏಕಾಂಗಿಯಾಗಿದ್ದ ಮನುಷ್ಯ ಹಲವಾರು ದೌರ್ಬಲ್ಯಗಳನ್ನು, ತೊಂದರೆಗಳನ್ನು ಮತ್ತು ಸುಖಾಪೇಕ್ಷವನ್ನು ಹೊಂದಿದ್ದ ಸಾಂಗತ್ಯವನ್ನು ಬಯಸುತ್ತಿದ್ದನು. ಸುಖ, ದೌರ್ಬಲ್ಯ, ಪ್ರೇಮ ಇವು ಮನುಷ್ಯನಲ್ಲಿ ಸಾಂಗತ್ಯವನ್ನು ಬೆಳೆಸುತ್ತವೆ. ಬೇಟೆಯ ಹಂತದಲ್ಲಿ ಮನುಷ್ಯನು ತನ್ನ ದೌರ್ಬಲ್ಯಗಳನ್ನು ಸರಿಪಡಿಸಿಕೊಳ್ಳಲು ಮತ್ತು ಪ್ರಕೃತಿಯ ವೈಪರೀತ್ಯಗಳನ್ನು ಎದುರಿಸಲು ಸಾಂಘಿಕತೆಯನ್ನು ಹೊಂದಲಾರಂಬಿಸಿದನು. ಸಾಂಗತ್ಯ ಮತ್ತು ನಿಸರ್ಗವನ್ನು ಸಂಘರ್ಷಾತ್ಮಕ ದೃಷ್ಟಿಕೋನದಿಂದ ನೋಡುತ್ತಾನೆ. ಈ ಹಂತದಲ್ಲಿ ಉತ್ಪಾದನ ಶಕ್ತಿ ಮನುಷ್ಯನೇ ಆಗಿದ್ದರೂ. ಉತ್ಪಾದನಾ ವಿಧಾನಗಳು, ಪರಿಕರಗಳ ಮನುಷ್ಯ ಕಂಡುಕೊಂಡನು ಈ ಪರಿಕರಗಳಿಂದ ಹೆಚ್ಚು ಉತ್ಪಾದಿಸಲು ಸಾಧ್ಯವಾಗುತ್ತಿರಲಿಲ್ಲ. ಅದಕ್ಕಾಗಿ ಈ ಹಂತದಲ್ಲಿಯ ಉತ್ಪಾದನಾ ಸಂಬಂಧಗಳು ಸಮತಾವಾದಿ ನೆಲೆಯಲ್ಲಿದ್ದವು ಮನುಷ್ಯ ಮುಗ್ಧ ಪ್ರಾಣಿಗಳನ್ನು ಪಳಗಿಸಿ ತನ್ನ ಜೊತೆ ಬೆಳೆಸಲು ಪ್ರಾರಂಭಿಸಿದನು. ಇದು ಮನುಷ್ಯನನ್ನು ಪಶುಪಾಲನಾ ಹಂತಕ್ಕೆ ಕರೆದೊಯ್ಯುತ್ತದೆ.

ಹೀಗೆ ಪಳಗಿಸಿದ ಪ್ರಾಣಿಗಳನ್ನು ಬೇಟೆಯ ಜೊತೆಗೆ ಪಶುಸಂಗೋಪನೆ ಮಾಡಲು ಪ್ರಾರಂಭಿಸಿದನು. ಸಂಗೋಪನೆಗೆ ಒಳಪಟ್ಟ ಪ್ರಾಣಿಗಳ ಉತ್ಪನ್ನಗಳನ್ನು ಸಂಗ್ರಹಿಸಲು ಮಡಿಕೆಗಳನ್ನು

ಕಂಡುಕೊಂಡನು. ಈ ಹಂತದಲ್ಲಿ ಉತ್ಪಾದನಾ ಸಾಧನಗಳು, ಪಶುಗಳು ಮತ್ತು ಮಡಿಕೆಗಳಾದವು. ಇವು ಮನುಷ್ಯನ ಉತ್ಪಾದನೆಯ ದಿಕ್ಕನ್ನೇ ಬದಲಿಸಿದವು. ರಕ್ಷಣೆಯ ಹೊಣೆ ಹೆಚ್ಚುತ್ತಾ ಹೋಗಿ ಹಲವಾರು ಪಶುಗಳ ಹೆಸರಲ್ಲಿ ಹಲವಾರು ಗುಂಪುಗಳು ಸೃಷ್ಟಿಯಾದವು. ಇಂತಹ ಒಂದು ಗುಂಪು ಗಣವಾಗಿ ಪರಿವರ್ತನೆಯಾಯಿತು. ಉತ್ಪಾದಿತ ಫಲಿತ ಅಧಿಪತಿಯಲ್ಲಿ ಕೇಂದ್ರೀಕರಣವಾಗದೆ ಗಣದಲ್ಲಿ ಹಂಚಿಕೆಯಾಗುತ್ತಿತ್ತು ಈ ಹಂತದಲ್ಲಿಯೇ Primitive Communist Society ಹುಟ್ಟಿಕೊಂಡಿತು. ಮನುಷ್ಯನನ ಸಾತತ್ಯ ಅಥವಾ ಹುಟ್ಟಿಗೆ ಹೆಣ್ಣೇ ಕಾರಣ ಎಂದು ತಿಳಿದಿದ್ದ ಮಾನವ ಈ ಹಂತದಲ್ಲಿ ಗಂಡು ಕೂಡ ಕಾರಣೀಕರ್ತ ಎಂದು ತಿಳಿದನು. ಇದರಿಂದ ಸ್ತ್ರೀ ಮತ್ತು ಪುರುಷರು ದೇವರುಗಳಾದರು ಈ ಹಂತದ ಮಹಿಳೆಯರು ಆಹಾರ ಸಂರಕ್ಷಣೆಯ ಜೊತೆಗೆ ಕೆಲವು ಉಪಯುಕ್ತ ಸಸ್ಯಗಳನ್ನು ಕಂಡುಕೊಂಡರು. ಇಂತಹ ಇನ್ನೂ ಹಲವು ಬೇರೆ ಬೇರೆ ಸಸ್ಯಗಳನ್ನು ಕಂಡುಕೊಳ್ಳುವ ಮತ್ತು ಅಂತಹ ಸಸ್ಯಗಳನ್ನು ಬೆಳೆಸುವಲ್ಲಿ ಹಾಗೂ ಮರು ಉತ್ಪಾದನೆ ಮಾಡುವುದರಲ್ಲಿ ಮಹಿಳೆಯರು ನಿರತರಾದರು ಈ ರೀತಿಯ ಲಘು ಉತ್ಪಾದನೆ ಮಾಡುವುದರಲ್ಲಿ ಮಹಿಳೆಯರು ನಿರತರಾದರು. ಈ ರೀತಿಯ ಲಘು ಕೃಷಿಯಲ್ಲಿ ತಾಮ್ರ ಮತ್ತು ಕಂಚು ಎಂಬ ಲೋಹಗಳನ್ನು ಬಳಸಿದರು. ಈ ಲಘು ಕೃಷಿ ಪದ್ಧತಿಯು ಮುಂದೆ ಮಾನವನ ಸಮಾಜವನ್ನು ಕೃಷಿ ಉತ್ಪಾದನಾ ಹಂತಕ್ಕೆ ತೆಗೆದುಕೊಂಡು ಹೋಯಿತು.

ಕೃಷಿ ಹಂತದಲ್ಲಿ ಭೂಮೀ ಉತ್ಪಾದನೆಯ ಮೂಲ ಭೂಮಿಯನ್ನು ಉಳಲು ತಾಮ್ರ ಮತ್ತು ಕಂಚುಗಳು ದುರ್ಬಲವಾಗಿದ್ದ ಕಾರಣ ಅವುಗಳಿಗೆ ಬದಲಾಗಿ ಕಬ್ಬಿಣದ ಬಳಕೆ ಆರಂಭವಾಯಿತು. "ಯಾವತ್ತು ಕಬ್ಬಿಣವು ಉತ್ಪಾದನಾ ಸಾಧನಗಳನ್ನು ಕ್ರಾಂತಿಕಾರಿಯಾಗಿ ರೂಪಾಂತರಿಸಿತೋ ಮಾನವನ ಸಾಮಾಜಿಕ ವ್ಯವಸ್ಥೆಯೂ ಸಹ ಅಮೂಲಾಗ್ರವಾಗಿ ಬದಲಾಯಿತು."[೪] ಕೃಷಿಯಲ್ಲಿ ಕಬ್ಬಿಣದ ಬಳಕೆಯಿಂದ ಅಧಿಕ ಉತ್ಪಾದನೆಯಾಗತೊಡಗಿತು. ಇಂತಹ ಅಧಿಕ ಉತ್ಪಾದನೆ ಗಣದ ಸದಸ್ಯರ ನಡುವೆ ಮಿಗುತಾಯವಾಗತೊಡಗಿತು. ಈ ಮಿಗುತಾಯವು ಸಾಮುದಾಯಿಕ ಒಡೆತನದ ಬದಲಿಗೆ ಖಾಸಗೀ ಆಸ್ತಿಯಾಗಿ ರೂಪಗೊಳ್ಳತೊಡಗಿತು. ಇಂತಹ ಅಧಿಕ ಉತ್ಪಾದನೆಯ ಸಂಗ್ರಹವು ಸಮತಾವಾದಿ ಸಮಾಜವನ್ನು ಊಳಿಗಮಾನ್ಯ ಸಮಾಜವಾಗಿಸಿತು. ಗಣ ವ್ಯವಸ್ಥೆಯ ಬದಲಾಗಿ ಕುಟುಂಬ ವ್ಯವಸ್ಥೆಯಿಂದ ಸಾಮಾಜಿಕ ನಿಯಮಗಳು ಹುಟ್ಟಿಕೊಂಡವು ಈ. ಹಂತದಲ್ಲಿ ಅಧಿಕಾರಗಳು ನಿಯಮಗಳಿಗೆ ಒಳಪಟ್ಟವು. ಅಂದರೆ ಕುಟುಂಬದ ಅಧಿಕಾರ, ಸಾಮಾಜಿಕ ಅಧಿಕಾರ, ಆರ್ಥಿಕ ಮತ್ತು ರಾಜಕೀಯ ಅಧಿಕಾರ, ಧಾರ್ಮಿಕ ಅಧಿಕಾರ ನಿಯಮಗಳಿಂದ ರಚಿಸಲ್ಪಟ್ಟವು.

ಈ ಮೇಲಿನ ಹಂತಗಳು ಸಮಾಜದ ಚಾರಿತ್ರಿಕ ಹಂತಗಳನ್ನು ವಿವರಿಸುತ್ತವೆ. ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಮತ್ತು ಕೃಷಿ ಎಂಬ ಉತ್ಪಾದನಾ ಹಂತಗಳು ಸಮಾಜದ

ವಿವಿಧ ಹಂತಗಳಾಗಿವೆ. ಆದರೆ ಇವು ಒಂದರ ಒಳಗೆ ಇನ್ನೊಂದು ಬೆರೆತು ಮನುಷ್ಯ ಸಮಾಜವನ್ನು ಸಂಕೀರ್ಣವಾಗಿ ರೂಪಿಸುತ್ತಾ ಬಂದಿವೆ. ಈ ನಾಲ್ಕು ಹಂತಗಳು ಒಂದಾದ ಮೇಲೆ ಒಂದು ಅನುಕ್ರಮವಾಗಿ ಅವಿರ್ಭವಿಸಲಿಲ್ಲ. ಒಂದರೊಳಗೊಂದು ಸಂಕರಗೊಳ್ಳುತ್ತಾ ಮಾನವ ಸಮಾಜವನ್ನು ಈ ಹಂತಕ್ಕೆ ತಂದು ನಿಲ್ಲಿಸಿದೆ. ಮತ್ತು ಈ ನಾಲ್ಕು ಪಾರಂಪರಿಕೆ ಉತ್ಪಾದನಾ ವ್ಯವಸ್ಥೆಗಳು ಮಾನವನ ಸಾಮಾಜಿಕ ಸಂಸ್ಥೆಗಳ ರೂಪಗೊಳ್ಳುವಿಕೆಯ ಯಾವುದೋ ಹಂತದಲ್ಲಿ ಮುಗಿದು ಹೋಗಿಲ್ಲ. ಈ ಪಾರಂಪರಿಕ ಉತ್ಪಾದನಾ ಕ್ರಮಗಳು ಇಂದಿಗೂ ಜೀವಂತವಾಗಿವೆ. ಇಂದು ಯಾವುದೇ ಬುಡಕಟ್ಟು ಸಮುದಾಯವನ್ನು ಅಧ್ಯಯಕ್ಕೊಳಪಡಿಸಿದರೆ, ಆ ಸಮುದಾಯದ ಆಚರಣೆ, ಮೌಖಿಕ ಸಾಹಿತ್ಯ, ಉತ್ಪಾದನಾ ವ್ಯವಸ್ಥೆ ಮತ್ತು ಆರಾಧಿಸುವ ದೈವಗಳ ಒಳಗೆ ಈ ಎಲ್ಲಾ ಸಂಗತಿಗಳ ಸಾಂಕೇತಿಕವಾಗಿ ಅಡಕವಾಗಿರುವುದು ಕಂಡುಬರುತ್ತದೆ.

ಸಂಸ್ಕೃತಿಯು ಇಡಿಯಾಗಿ ಎಲ್ಲಾ ಸ್ಥಿತ್ಯಂತರಗಳಿಗೆ ಒಳಗಾಗುವುದು ಎಂಬ ಮಾತು ಸಂಸ್ಕೃತಿ ಮನುಷ್ಯನ ಬದುಕಿನ ಉತ್ಪನ್ನವೆಂಬ ನಂಬಿಕೆ ಹಾಗೂ ಮನುಷ್ಯ ಅನೇಕ ಅವಿಷ್ಕಾರಗಳ ಮೂಲಕ ಬದುಕನ್ನು ಕಟ್ಟಿಕೊಂಡಿರುವ ರೀತಿ ಅರಿತಾಗ ಸ್ಪಷ್ಟವಾಗುತ್ತದೆ. "ಮಾನವನ ಸಾಮಾಜಿಕ ಸಂಸ್ಥೆಗಳ ವಿಕಾಸದಲ್ಲಿ ಮನುಷ್ಯ ಹೇಗೆ ತನ್ನ ಸುತ್ತಲ ರೋಮಂಚನಗಳಿಂದ ಪ್ರಭಾವಿತನಾಗಿ ಬದಲಾವಣೆಗಳನ್ನು ತಂದುಕೊಂಡ ಎಂಬುದು ಗೊತ್ತಾಗುತ್ತದೆ."[೨] ಈ ವಿಕಾಸಶೀಲ ಗುಣವೇ ಶಿಲಾಯುಗದಿಂದ ನಮ್ಮನ್ನು ಇಂದಿನ ಆಧುನಿಕ ತಂತ್ರಜ್ಞಾನದ ವಿಶ್ವಗ್ರಾಮಕ್ಕೆ ಎಳೆದು ತಂದು ನಿಲ್ಲಿಸಿದೆ. ಹೀಗೆ ಇಂಡಿಯಾದ ಸಾಂಸ್ಕೃತಿಕ ಘಟಕಗಳು ಸ್ಥಿತ್ಯಂತರಗಳು ಹಲವು ಮಜಲು ಹಾದು ಬಂದು ಇನ್ನೂ ತಮ್ಮ ಚಹರೆಗಳನ್ನು ಉಳಿಸಿಕೊಂಡಿವೆ.

ಭಾರತೀಯ ಸಮಾಜವು ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತಾ ಬಂದಿದೆ. ಮಧ್ಯಮ ಯುಗದಲ್ಲಿ ಮುಸ್ಲಿಂರು ಭಾರತದ ಮೇಲೆ ದಾಳಿಮಾಡಿ ಭಾರತೀಯ ಕಲೆ, ಧರ್ಮಕ್ಕೆ ಪೆಟ್ಟು ನೀಡುವುದರ ಜೊತೆಗೆ ರಾಜಾಧಿಕಾರವನ್ನು ನೆಲೆಗೊಳಿಸಿ ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಬದಲಾವಣೆಗೆ ಒಳಪಡಿಸಿತು. ಆದರೆ ಬದಲಾವಣೆಯ ವೇಗ ಮಂದಗತಿಯಲ್ಲಿತ್ತು.

೧೫ನೇ ಶತಮಾನದ ಕೊನೆಯುಲ್ಲಿ ಪಶ್ಚಿಮದ ವಸಾಹತು ಶಕ್ತಿಗಳು ಭಾರತವನ್ನು ಪ್ರವೇಶಿಸಲು ಪ್ರಾರಂಭಿಸಿದವು. ಇವರ ಮೊದಲ ಉದ್ದೇಶ ವ್ಯಾಪಾರ ಮಾಡುವುದು ಆಗಿತ್ತು. ನಂತರ ಕಾಲದಲ್ಲಿ ಬ್ರಿಟಿಷರು ಭಾರತದ ಆಡಳಿತದ ಚುಕ್ಕಾಣಿಯನ್ನು ಹಿಡಿದು ಆಳ್ವಿಕೆ ಪ್ರಾರಂಭಿಸಿದರು. ಆಳ್ವಿಕೆಯನ್ನು ಆರಂಭಿಸಿದ ಬ್ರಿಟಿಷರು ಭಾರತದ ಚರಿತ್ರೆ, ಭೂಗೋಳ, ಭಾಷೆ, ವ್ಯಾಕರಣ, ಸಾಹಿತ್ಯ ಸಂಸ್ಕೃತಿ, ಎಲ್ಲದರ ಕುರಿತು ಅಧ್ಯಯನಗಳು ಪ್ರಾರಂಭವಾದವು. ಶಾಸನ ಮತ್ತು ಕಾವ್ಯ ಮೀಮಾಂಸೆ ವ್ಯಾಕರಣಕ್ಕೆ ಸಂಬಂಧಿಸಿದ ಸಂಗ್ರಹಗಳು ಮತ್ತು ಸಂಪಾದನೆಗಳು

ನಡೆದವು. ಇದನ್ನು ಯುರೋಪಿಯನ್ನರ ಜ್ಞಾನದಾಹವೆಂದು, ನಮ್ಮ ಭಾಷೆ, ಸಂಸ್ಕೃತಿಗಳ ಮೇಲೆ ನಮಗೆ ಇಲ್ಲದ ಆಸಕ್ತಿಯನ್ನು ವಿದೇಶಿಗರು ತೋರಿಸಿದರು ಎಂದು ಏನು ತಿಳಿಯದೇ ಹೇಳುವವರು ಉಂಟು. ಆದರೆ ವಾಸ್ತವದಲ್ಲಿ ಭಾರತವನ್ನು ಆಳುವುದಕ್ಕೆ ವಸಾಹತು ಶಾಹಿಗಳಿಗೆ ಈ ದೇಶದ ಅಂತರಂಗದ ವಸ್ತುಸ್ಥಿತಿಯನ್ನು ತಿಳಿಯಬೇಕಾದ ಅಗತ್ಯವಿತ್ತು. ಅದಕ್ಕಾಗಿ ಈ ದೇಶದ ಜನರನ್ನು ತಿಳಿಯಲು ಸಮುದಾಯಗಳು ಕುರಿತು ತಿಳಿಯಲು ಅಧ್ಯಯನಗಳು ಪ್ರಾರಂಭಿಸಿದರು. ಈ ಅಧ್ಯಯನಗಳು ವಸಾಹತುಶಾಹಿ ಉಪಯೋಗವಾದಿ ಸೈದ್ಧಾಂತಿಕ ನೆಲೆ ಮತ್ತು ವಿರಾಟರಾಜಕೀಯ ಉದ್ದೇಶಗಳನ್ನು ಹೊಂದಿದ್ದವು. ಇಂತಹ ಅಧ್ಯಯನಗಳಿಂದ ಭಾರತದ ಅಂತರಂಗದ ವಸ್ತುಸ್ಥಿತಿಯನ್ನು ಅರಿತುಕೊಂಡಿದ್ದರ ಪರಿಣಾಮವಾಗಿ ೧೫೦ ವರ್ಷಗಳ ಆಳ್ವಿಕೆ ಮಾಡಲು ಸಾಧ್ಯವಾಯಿತು. ಈ ದೀರ್ಘ ಆಳ್ವಿಕೆಯ ಫಲವಾಗಿ ಬ್ರಿಟೀಷರು ಪರಿಚಯಿಸಿದ ವಿಜ್ಞಾನ, ತಂತ್ರಜ್ಞಾನ, ಆಧುನಿಕತೆ, ಆಡಳಿತ ವ್ಯವಸ್ಥೆ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆ, ಶಾಸನಗಳು ಕಾನೂನುಗಳು, ಶೈಕ್ಷಣಿಕೆ ವ್ಯವಸ್ಥೆ, ಧರ್ಮ ಇತ್ಯಾದಿ ಪ್ರಭಾವಗಳಿಂದ ಭಾರತದ ಸಮಾಜದಲ್ಲಿ ಬದಲಾವಣೆ ಉಂಟಾಗಿರುವುದು ಕಂಡುಬರುತ್ತದೆ. ಬದಲಾವಣೆಯ ಗಾಳಿಗೆ ಬುಡಕಟ್ಟುಗಳು ಹೊರತಾಗಿಲ್ಲ.

ಬ್ರಿಟೀಷರ ಆಳ್ವಿಕೆಗೆ ಮೊದಲು ಬುಡಕಟ್ಟುಗಳ ಸ್ವಾತಂತ್ರ್ಯಕ್ಕೆ ಯಾವ ರೀತಿಯಲ್ಲಿಯೂ ದಕ್ಕೆ ಬಂದಿರುವುದಿಲ್ಲ ಮುಸಲ್ಮಾನರ ಹಲವಾರು ಶತಮಾನಗಳ ಆಳ್ವಿಕೆಯ ಕಾಲದಲ್ಲಿಯೂ ಬುಡಕಟ್ಟುಗಳು ಸ್ವತಂತ್ರವಾಗಿದ್ದವು ಬ್ರಿಟಿಷರು ಬಂದ ನಂತರ ಭಾರತದಾದ್ಯಂತ ಏಕರೀತಿಯ ಆಳ್ವಿಕೆಯ ಕ್ರಮ ಜಾರಿಗೆ ಬಂತು ಕಾಲಕ್ರಮೇಣ ಕೈಗಾರಿಕಾ ಕ್ರಾಂತಿಯಿಂದಾಗಿ ಬ್ರಿಟಿಷರು ಭಾರತದಾದ್ಯಂತ ರೈಲ್ವೆ ಸಂಪರ್ಕ ಏರ್ಪಡಿಸಲು, ರಸ್ತೆಗಳನ್ನು ಮಾಡಲು ಆರಂಭಿಸಿದರು. ಇದರಿಂದ ಕಾಡುಗಳನ್ನು ಕಡಿಯ ಬೇಕಾಯಿತು. ಸಂಪರ್ಕ ಸಾಧನಗಳು ಹೆಚ್ಚಾದಂತೆಲ್ಲ ಪರ್ವತ ಅರಣ್ಯಗಳಲ್ಲಿ ವಾಸವಾಗಿದ್ದ ಬುಡಕಟ್ಟುಗಳ ಜನ ಅನಿವಾರ್ಯವಾಗಿ ಇತರ ಜನಗಳ ಸಂಪರ್ಕಕ್ಕೆ ಬರಬೇಕಾಯಿತು. ಈ ಮಧ್ಯೆ ಕ್ರಿಶ್ಚಿಯನ್ ಪಾದ್ರಿಗಳು ಬುಡಕಟ್ಟು ಜನರಿಗೆ ಕ್ರೈಸ್ತಧರ್ಮದ ಬೋಧನೆಯನ್ನು ಮಾಡುವುದರ ಮೂಲಕ ಅವರನ್ನು ತಮ್ಮ ಧರ್ಮಕ್ಕೆ ಮತಾಂತರವಾಗುವಂತೆ ಮಾಡಿದರು.

ಬುಡಕಟ್ಟುಗಳ ಕೆಲವು ಜನ ಕ್ರಿಶ್ಚಿಯನ್ನಾರಾದದ್ದು ಉಂಟು. ಭಾರತದ ಬುಡಕಟ್ಟುಗಳ ಮೇಲೆ ತೀವ್ರ ಪರಿಣಾಮ ಉಂಟಾಗಲು ಬ್ರಿಟೀಷರು ಬುಡಕಟ್ಟು ಜನರ ನೆಲೆಗಳಾದ. ಕಾಡುಮೇಡು ಪ್ರದೇಶಗಳನ್ನು ವಶಪಡಿಸಿಕೊಂಡದ್ದೇ ಕಾರಣವಾಗಿತು. ಇದರಿಂದ ಕುಮ್ರಿ ಬೇಸಾಯ ಮಾಡುತ್ತಿದ್ದ ಹಲವಾರು ಬುಡಕಟ್ಟುಗಳ ಜನಕ್ಕೆ ತಮ್ಮ ಭೂಮಿ ಇಲ್ಲದಂತಾಯಿತು. ಈ ಸಂದರ್ಭದಲ್ಲಿಯೇ ಬ್ರಿಟಿಷರು ಮತ್ತು ದೊಡ್ಡ ಜಮೀನ್ದಾರರು. ಭೂಮಿಯ ಒಡೆಯರಾದರು. ಗಣಿ ಮಾಲೀಕರಾದರು.

ಇವುಗಳಲ್ಲಿ ಕೆಲಸಮಾಡಲು ಕೆಲಸಗಾರರು ಬೇಕಾಯಿತು. ಭೂಮಿಯನ್ನೂ ಆ ವೇಳೆಗಾಗಲೇ ಕಳೆದುಕೊಂಡಿದ್ದ ಬುಡಕಟ್ಟು ಜನ ತೋಟಗಳಲ್ಲಿ, ಗಣಿಗಳಲ್ಲಿ ಕೆಲಸಗಾರರಾಗಿ ಸೇರಿದರು. ಇದರಿಂದಾಗಿ ದಿನನಿತ್ಯ ಇತರರ ಜನರ ಸಂಪರ್ಕಕ್ಕೆ ಬಂದು, ಬುಡಕಟ್ಟು ಜನ ತಮ್ಮ ಸಂಸ್ಕೃತಿಯ ಮೂಲಸ್ವರೂಪವನ್ನು ಕಳೆದುಕೊಳ್ಳುತ್ತಾ ಇತರ ಹಿಂದು ಜಾತಿಗಳ ಸಂಪ್ರದಾಯಗಳನ್ನು ಅನುಸರಿಸತೊಡಗಿದರು. ಬುಡಕಟ್ಟುಗಳಿಗೆ ಸ್ಥಿರವಾದ ಕೆಲಸಗಳು ದೊರಕಲಿಲ್ಲ. ಇದರಿಂದಾಗಿ ಬಹುಪಾಲು ಬುಡಕಟ್ಟು ಜನ ಕೂಲಿಗಳಾಗಿ ದುಡಿಯ ತೊಡಗಿ ತೀವ್ರವಾದ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದರು. ವ್ಯಾಪಾರಿಗಳ ಹಾಗೂ ಸಾಹುಕಾರರ ಬಳಿ ಸಾಲಮಾಡಿ, ತಮ್ಮಲ್ಲಿದ್ದ ಅಲ್ಪಸ್ವಲ್ಪ ಪದಾರ್ಥಗಳನ್ನೂ ಕಳೆದುಕೊಂಡು ಕಡುಬಡತನ ಅನುಭವಿಸಬೇಕಾಯಿತು. ಇವರಿಗೆ ಮೊದಲಿದ್ದ ಸುಖಶಾಂತಿಗಳು ಇಲ್ಲದಂತಾದವು. ತಮ್ಮ ಆಸ್ತಿಯಾಗಿದ್ದ ಭೂಮಿ ಹಾಗೂ ಸಂಸ್ಕೃತಿಯನ್ನು ಕಳೆದುಕೊಂಡು ಅನಾಥರಾದರು ದಟ್ಟವಾದ ಪರ್ವತ ಪ್ರದೇಶಗಳಲ್ಲಿದ್ದವರು ಮಾತ್ರ ಈ ಪ್ರಭಾವದಿಂದ ತಪ್ಪಿಸಿಕೊಂಡು ಸುರಕ್ಷಿತವಾಗಿ ಉಳಿದು, ತಮ್ಮ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡರು. ಇದರಿಂದಾಗಿ ಭಾರತದ ಪ್ರತಿಯೊಂದು ಬುಡಕಟ್ಟಿನಲ್ಲಿಯೂ ಮೂಲ ಸಂಸ್ಕೃತಿಯನ್ನು ಉಳಿಸಿಕೊಂಡ ವರ್ಗ, ಹಿಂದೂಗಳಾಗಿ ಪರಿವರ್ತಿತವಾದ ವರ್ಗ ಎಂಬ ಎರಡು ವರ್ಗಗಳಾವು. ಕೆಲವು ಬುಡಕಟ್ಟಿನ ಜನರಿಗಂತೂ ತಮ್ಮ ಪ್ರದೇಶ ಪರಕೀಯರ ವಶವಾಯಿತೆಂಬ ಪರಕೀಯರ ಪ್ರಜ್ಞೆ ಜಾಗೃತವಾಗಿ ತಮ್ಮ ಹಕ್ಕುಗಳನ್ನು ಉಳಿಸಿಕೊಳ್ಳಲು ದಂಗೆಯೆದ್ದರು. ಬ್ರಿಟಿಷರು ಈ ದಂಗೆಗಳನ್ನು ಅಡಗಿಸಿದರು. ಒಟ್ಟಾರೆಯಾಗಿ ಬ್ರಿಟಿಷರು ಪರಿಚಯಿಸಿದ ಬಂಡವಾಳಶಾಹಿ ಉತ್ಪಾದನಾ ವ್ಯವಸ್ಥೆ, ಶಾಸನಗಳು, ಕಾನೂನುಗಳು, ಶೈಕ್ಷಣಿಕ ವ್ಯವಸ್ಥೆಯ ಪರಿಣಾಮವಾಗಿ ಬದಲಾವಣೆ ಹೊಂದಿದ್ದರು.

ಸ್ವಾತಂತ್ರ್ಯಾನಂತರದ ಭಾರತದಲ್ಲಿ ಬುಡಕಟ್ಟುಗಳ ಪರಿಸ್ಥಿತಿ ತೀವ್ರವಾದ ಗತಿಯಲ್ಲಿ ಬದಲಾವಣೆ ಹೊಂದುತ್ತಿವೆ. ಕೈಗಾರಿಕಾ ಕ್ರಾಂತಿಯ ಪ್ರಭಾವ ಮೊದಲಿಗಿಂತಲೂ ಸ್ವಾತಂತ್ರ್ಯ ನಂತರದ ಕಾಲದಲ್ಲಿ ತೀವ್ರವಾಗಿದೆ. ಕಾರಣ ರಸ್ತೆಗಳು, ರೈಲು ಮಾರ್ಗಗಳು ಹೆಚ್ಚಾಗಿರುವುದರಿಂದ ಬೆಟ್ಟಗುಡ್ಡಗಳ ಪ್ರದೇಶಗಳಿಗೂ ಇಂದು ಸಂಪರ್ಕ ಬೆಳೆದಿವೆ. ವ್ಯವಸಾಯದ ಭೂಮಿಗೆಂದು, ಸೌದೆ ಇದ್ದಿಲುಗಳಿಗೆಂದು, ಮರಮುಟ್ಟುಗಳಿಗೆಂದು ಜನ ಕಾಡುಗಳಲ್ಲಿನ ಮರಗಳನ್ನು ಕಡಿಯುತ್ತಿರುವುದರಿಂದ ಅರಣ್ಯಗಳು ಸಹಜವಾಗಿಯೂ ತೆಳುವಾಗುತ್ತಿವೆ. ಅರಣ್ಯ ಇಲಾಖೆಯ ಅಧಿಕಾರಿಗಳು ಮತ್ತು ಬುಡಕಟ್ಟು ಜನರೊಡನೆ ಹೊಂದಾಣಿಕೆ ಅಷ್ಟಾಗಿ ಕಂಡುಬರುತ್ತಿಲ್ಲ.

ವಿದ್ಯಾಭ್ಯಾಸ ಹಾಗೂ ಮತದಾನದ ಹಕ್ಕು ಬುಡಕಟ್ಟು ಜನರಿಗೂ ಇಂದು ಲಭ್ಯವಾಗುತ್ತಿರುವು ದರಿಂದ ರಾಜಕೀಯ ಕ್ಷೇತ್ರದಲ್ಲಿ ಅವರು ಭಾಗವಹಿಸಲು ಸಾಧ್ಯವಾಗಿದೆ. ನಾಗಾಗಳು ಪ್ರತ್ಯೇಕ ರಾಜ್ಯವನ್ನು ತಮ್ಮ ಹೋರಾಟದಿಂದಲೇ ಗಳಿಸಿಕೊಂಡಿದ್ದು, ಅವರಲ್ಲಿ ರಾಜಕೀಯ ಪ್ರಜ್ಞೆ

ಜಾಗೃತವಾಗಿದೆಯಂಬುದಕ್ಕೆ ಸಾಕ್ಷಿಯಾಗಿದೆ. ಸರ್ಕಾರ ಕೈಗೊಂಡ ಕೆಲವು ಕ್ರಮಗಳಿಂದ ಬುಡಕಟ್ಟುಗಳ ಕಲೆಗಳು ಹೆಸರಿಲ್ಲದಂತಾದವು. ಭಾರತದ ಬುಡಕಟ್ಟುಗಳು ಸಮಸ್ಯೆಯಲ್ಲಿ, ಬುಡಕಟ್ಟುಗಳು ಮುಂದುವರೆಸಿಕೊಂಡು ಹೋಗಬೇಕೆ ಅಥವಾ ಇತರ ಜನರೊಡನೆ ಸೇರಿ ಲೀನವಾಗಬೇಕೇ ಎಂಬದು ಇಲ್ಲಿರುವ ಸಮಸ್ಯೆ.

ಇನ್ನೂ ವಸಾಹತೋತ್ತರ ಕಾಲಘಟ್ಟದ ಸಮುದಾಯಗಳ ಅಧ್ಯಯನಗಳಲ್ಲೂ ಸಹ ಉಪಯೋಗವಾದಿ ದೃಷ್ಟಿಕೋನ ಇದ್ದಕ್ಕಿದ್ದಂತೆ ಹರಿದು ಬಂದಿರುವುದು ಕಾಣಬರುತ್ತದೆ. ಈ ಕಾಲಘಟ್ಟದ ಮೇಲ್ವರ್ಗಗಳ ಅಧ್ಯಯನಕಾರರ ಹಿತಾಸಕ್ತಿ ವಸಾಹತುಶಾಹಿ ಹಿತಾಸಕ್ತಿಗಿಂತ ಭಿನ್ನವಾಗೇನು ಇರಲಿಲ್ಲ ರಾಷ್ಟ್ರೀಯ ಹೋರಾಟದಲ್ಲಿ ಬ್ರಿಟೀಷರ ಗುಂಡಿಗೆ ಎದೆಗೊಟ್ಟು ನಿಂತಿದ್ದ ಸಮುದಾಯಗಳು ಸ್ವಾತಂತ್ರ್ಯನಂತರ ಸ್ಥಳೀಯ ಆಳುವ ವರ್ಗದ ದೃಷ್ಟಿಯಲ್ಲಿ ದೇಶ ದ್ರೋಹಿಗಳಾಗಿ ಪರಿಗಣಿಸಲಾಗುತ್ತದೆ. ಇದೇ ದೃಷ್ಟಿಕೋನ ಸಮುದಾಯಗಳ ಅಧ್ಯಯನದಲ್ಲಿ ಡಾಳಾಗಿ ಕಾಣಿಸಿಕೊಳ್ಳುತ್ತವೆ.

ಆಧುನಿಕತೆ ಇನ್ನೊಂದು ಹಂತವೆ ಜಾಗತೀಕರಣವಾಗಿದ್ದು, ವಿಶ್ವಸಮಾಜಗಳನ್ನು ಅತ್ಯಂತ ಹತ್ತಿರದಿಂದ ಕೂಡಿಸುವ ಸಂಕೀರ್ಣವಾದ ಒಂದು ಸ್ಥಿತಿ. ವಿಶ್ವ ಆರ್ಥಿಕ ಸಂಬಂಧಳು, ವಿಶ್ವರಾಜಕೀಯ ಸಂಪರ್ಕದಲ್ಲಿಯೇ ಜಾಗತೀಕರಣ ಅಡಗಿದೆ. ಇದು ಹೊಸ ಜಗತ್ತಿನ ತಂತ್ರಜ್ಞಾನ, ವಿಜ್ಞಾನ ಕುಶಲತೆ, ಭೌದ್ಧಿಕ ಕ್ರಿಯೆಗಳನ್ನು ವಿಕೇಂದ್ರಿಕರಣಗೊಳಿಸುವ ಉದ್ದೇಶವನ್ನು ಹೊಂದಿದೆ. ಈ ಜಾಗತೀಕರಣ ಮೂರನೇಯ ರಾಷ್ಟ್ರಗಳಲ್ಲಿ ನಾಗರಿಕತೆಯ ಸವಾಲುಗಳನ್ನು ಮುಖಾಮುಖಿಯಾಗಿಸುವುದು. ವಿಶ್ವ ಆರ್ಥಿಕ ಸಂಬಂಧಗಳ ಆಳದಲ್ಲಿ ತೃತೀಯ ಜಗತ್ತಿನ ಮೇಲೆ ಹಿಡಿತ ಸಾಧಿಸುವ ಹುನ್ನಾರಗಳಿವೆ. ಜಾಗತೀಕರಣದಿಂದಾಗಿ ತೃತೀಯ ಜಗತ್ತಿನ ಕೆಳಜಾತಿಗಳ, ಕೆಳವರ್ಗಗಳು ಬುಡಕಟ್ಟುಗಳು ವಿಭಿನ್ನವಾದ ಹೊಸ ವಿಚಾರ, ತಂತ್ರಜ್ಞಾನ, ಆಧುನಿಕತೆ, ಶಿಕ್ಷಣ ಹಾಗೂ ಜಾಗತೀಕ ಸವಾಲುಗಳು ಸ್ವೀಕರಿಸಬೇಕಾದ ಸವಾಲನ್ನು ಎದುರಿಸುತ್ತವೆ. ಅಲ್ಲದೆ ಇವುಗಳ ಪ್ರಭಾವದಿಂದ ತಮಗೆ ಅರಿವಿಲ್ಲದೆ ಬದಲಾವಣೆಗೆ ಒಳಗಾಗುತ್ತಿವೆ.

ಜಾಗತೀಕರಣವು ತೃತೀಯ ಜಗತ್ತಿನ ರಾಷ್ಟ್ರಗಳ ಸರಕಾರಗಳು ಆಡಳಿತದ ಕೆಲವು ಮಹತ್ವದ ಕ್ಷೇತ್ರಗಳನ್ನು ಖಾಸಗೀಕರಣಗೊಳಿಸಿ, ಇಂತಹ ಕ್ಷೇತ್ರಗಳ ಹಿಡಿತದಿಂದ, ಆಧೀನ ರಾಷ್ಟ್ರಗಳ ಮೇಲೆ ಏಕಸ್ವಾಮ್ಯವನ್ನು ಸಾಧಿಸುವುದು ಇದರಿಂದ ಸ್ಥಳೀಯ ವಿಷಮ ಸ್ಥಿತಿಗಳ ಅರಿವಿಲ್ಲದೆ ಈ ರಾಷ್ಟ್ರಗಳ ಆಡಳಿತವನ್ನು ಮತ್ತು ಅರ್ಥಿಕ ಚಟುವಟಿಕೆಗಳನ್ನು ರೂಪಿಸುತ್ತದೆ.

ಜಾಗತೀಕರಣವು ಉದಾರೀಕರಣ ನೀತಿಯಿಂದ ತಾನು ಉತ್ಪಾದಿಸಿದ ಸರಕುಗಳನ್ನು ಮಾರಾಟಮಾಡಲು ತೃತೀಯ ಜಗತ್ತಿನ ರಾಷ್ಟ್ರಗಳನ್ನು ವ್ಯಾಪಾರ ಮಾರುಕಟ್ಟೆಗಳನ್ನಾಗಿ

ಮಾಡಿಕೊಂಡಿತು. ಅಲ್ಲದೆ ತೃತೀಯ ಜಗತ್ತಿನ ಮಾರುಕಟ್ಟೆಯ ನೀತಿಯನ್ನು ರೂಪಿಸುವ ಮತ್ತು ನಿಯಂತ್ರಿಸುವ ಅಧಿಕಾರವನ್ನು ಪಡೆದುಕೊಂಡಿದೆ.

ವಿಶ್ವಬ್ಯಾಂಕ್ WTO ಮುಂತಾದ ಸಂಸ್ಥೆಗಳು ಕೇಳಿದಾಗೆಲ್ಲ ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಸಾಲಕೊಡುತ್ತವೆ. ವಿಶ್ವಬ್ಯಾಂಕ್ ತಾನು ನೀಡುವ ಸಾಲವನ್ನು ಯಾವ ಕ್ಷೇತ್ರಗಳಿಗೆ ಬಳಸಬೇಕೆಂದು ಅಭಿವೃದ್ಧಿಯ ನೆಪವೊಡ್ಡಿ ನಿರ್ದೇಶನ ಕೊಡುತ್ತಲೆ ಇರುತ್ತದೆ. ಇದರ ಉದ್ದೇಶ ಅಪ್ರತ್ಯಕ್ಷವಾಗಿ ಆ ದೇಶಗಳ ಆರ್ಥಿಕ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳುವುದಾಗಿದೆ.

ಜಾಗತೀಕರಣವು ಖಾಸಗೀಕರಣ, ಉದಾರೀಕರಣ, ವಿಶ್ವಬ್ಯಾಂಕ್ WTO ಗಳು ತೃತೀಯ ಜಗತ್ತಿನ ದೇಶಗಳ ಮೇಲೆ ಒತ್ತಡಗಳನ್ನು ಉಂಟುಮಾಡುತ್ತವೆ. ಈ ಒತ್ತಡಗಳ ಕಾರಣದಿಂದ ತೃತೀಯ ಜಗತ್ತಿನ ರಾಷ್ಟ್ರಗಳನ್ನು ತನ್ನ ಹಿಡಿತಲ್ಲಿಟ್ಟುಕೊಳ್ಳುತ್ತದೆ. ಇದರ ಪರಿಣಾಮವಾಗಿ ತೃತೀಯ ಜಗತ್ತಿನ ರಾಷ್ಟ್ರಗಳ ಸಮುದಾಯಗಳ ಸಾಮಾಜಿಕ, ಆರ್ಥಿಕ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಒಳಾಗಿವೆ. ಅದರಂತೆ ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಜಾಗತೀಕರಣದ ಸಂದರ್ಭದಲ್ಲಿ ಸ್ಥಿತ್ಯಂತರಗಳಿಗೆ ಒಳಗಾಗಿರುವುದು ಈ ಕೆಳಗಿನ ಅಂಶಗಳಿಂದ ಸ್ಪಷ್ಟವಾಗುವುದು.

**ಬೇಡ ಮತ್ತು ಮೇದ ಬುಡ್ಡಕಟ್ಟುಗಳ ಸಾಮಾಜಿಕ ಸ್ಥಿತ್ಯಂತರ**

ಪ್ರತಿಯೊಂದು ಸಮಾಜವು ಚಲನಶೀಲನತೆಯನ್ನು ಹೋಂದಿರುತ್ತದೆ. ಹಾಗೂ ಕಾಲದ ಲಯಕ್ಕೆ ತನ್ನನ್ನು ವಿಸ್ತರಿಸಿಕೊಳ್ಳುವ ಅಥವಾ ತನ್ನ ಸಂವೇದನೆಗಳನ್ನು ಆ ಬದಲಾದ ಲಯಕ್ಕೆ ಹೊಂದಿಸಿಕೊಳ್ಳುವ ಪ್ರಯತ್ನವನ್ನು ಹೊಂದಿರುತ್ತದೆ ಎಂದು ಈ ಮೊದಲೇ ಹೇಳಲಾಗಿದೆ. ಬುಡಕಟ್ಟು ಸಮುದಾಯಗಳು ಆಹಾರ ಸಂಗ್ರಹಣೆಯ, ಬೇಟೆಯ ಪಶುಪಾಲನೆಯ, ಮತ್ತು ಕೃಷಿ ಎಂಬ ನಾಲ್ಕು ಹಂತಗಳು ದಾಟಿದ್ದಲ್ಲದೆ ಕೈಗಾರಿಕಾ ಹಂತ ಮತ್ತು ವ್ಯಾಪಾರ ವಾಣಿಜ್ಯದ ಹಂತವನ್ನು ಕಂಡಿವೆ. ಆ ಬದಲಾವಣೆಯ ಸರ್ವವ್ಯಾಪಕವಾಗಿದ್ದು, ಆಧುನಿಕ ಸಮುದಾಯಗಳಿಗಿಂತ ಬುಡಕಟ್ಟು ಸಮುದಾಯಗಳಲ್ಲಿ ಬದಲಾವಣೆಯು ಮಂದಗತಿಯಲ್ಲಿರುತ್ತದೆ. ಇದಕ್ಕೆ ಬುಡಕಟ್ಟುಗಳ ವಿಶಿಷ್ಟವಾದ ಸಂಸ್ಕೃತಿಯೇ ಕಾರಣವಾಗಿದೆ.

ಭಾರತದ ಸಮಾಜವನ್ನು ಅಧ್ಯಯನ ಮಾಡಿದ ಬಹುತೇಕ ಮಾನವಶಾಸ್ತ್ರಜ್ಞರು ಸಾಮಾನ್ಯವಾಗಿ ಸಮಾಜವನ್ನು ಎರಡು ಬಗೆಯಲ್ಲಿ ವಿಂಗಡಿಸುತ್ತಾರೆ, ಒಂದು "ಮುಖ್ಯವಾಹಿನಿ ಸಮಾಜ" ಇನ್ನೊಂದು ಬುಡಕಟ್ಟು ಸಮುದಾಯಗಳೆಂದು, ಬುಡಕಟ್ಟು ಸಮಾಜಗಳನ್ನು ಪ್ರತ್ಯೇಕಗೊಂಡ ಸಮಾಜಗಳು ಎಂಬಂತೆ ಪರಿಗಣಿಸುತ್ತಾ ಬಂದಿದ್ದಾರೆ. ಈ ವರ್ಗೀಕರಣವು ಭಾರತದ ಸಮಾಜದ ಆಳವನ್ನು ಅರಿಯದೆ ಮಾಡಿದ ವರ್ಗೀಕರಣವಾಗಿದೆ. ಆದರೆ ಈ

ದೇಶದ ಚರಿತ್ರೆಯಲ್ಲಿ ಬಹುತೇಕ ಬುಡಕಟ್ಟುಗಳು "ಮುಖ್ಯವಾಹಿನಿ" ಎಂದು ಕರೆಯಲ್ಪಡುವ ಸಮಾಜದ ಜೊತೆಗೆ ನಿರಂತರವಾಗಿ ನಡೆದು ಬಂದಿವೆ" ಈ ಕಾರಣದಿಂದ ಈ ದೇಶದ ಸಂಸ್ಕೃತಿ ಸಾಹಿತ್ಯ, ಕಲೆ, ಸಾಮಾಜಿಕ ಮೌಲ್ಯಗಳಲ್ಲಿ ಆದಿವಾಸಿಗಳ ಮತ್ತು ಮುಖ್ಯವಾಹಿನಿಯ ಯಾವುದೆಂದು ಪ್ರತ್ಯೇಕಿಸಲು ಸಾಧ್ಯವಾಗಿಲ್ಲ.

ಕೈಗಾರಿಕಾ ಕ್ರಾಂತೀಯ ಪರಿಣಾಮದಿಂದ ಹುಟ್ಟಿಕೊಂಡ ರಸ್ತೆಗಳು, ರೈಲು ಮಾರ್ಗಗಳು ಬುಡಕಟ್ಟುಗಳಿಗೆ ನಾಗರಿಕ ಜಗತ್ತಿನ ಸಂಪರ್ಕವನ್ನು ಬೆಳೆಸಿವೆ. ಅಷ್ಟೇ ಅಲ್ಲದೆ ಹಲವಾರು ಯೋಜನೆಗಳು, ಕಾಯಿದೆ ಕಾನೂನುಗಳು ಅವರನ್ನು ನಾಗರಿಕ ಜಗತ್ತಿಗೆ ತಂದು ನಿಲ್ಲಿಸಿದೆ. ಇದರ ಪರಿಣಾಮದಿಂದ ಬುಡಕಟ್ಟುಗಳ ಬದುಕು ಬದಲಾಗಿದೆ. ಅದಕ್ಕಾಗಿ ಬುಡಕಟ್ಟುಗಳ ಬದುಕನ್ನು ಗಮನಿಸಿದರೆ ಹಂತಹಂತವಾಗಿ ಬದಲಾವಣೆಯು ವೇಗವು ಹೆಚ್ಚಾಗುತ್ತಿದೆ.

ಬೇಡ ಮತ್ತು ಮೇದ ಸಮುದಾಯಗಳು ಬುಡಕಟ್ಟು ಸಮುದಾಯಗಳಾಗಿವೆ. ಸರ್ಕಾರ ಈ ಸಮುದಾಯಗಳನ್ನು ಪರಿಶಿಷ್ಟ ಪಂಗಡದ ಪಟ್ಟಿಗೆ ಸೇರಿಸಿದೆ. ಇವು ಸಾಮಾನ್ಯವಾಗಿ ಕರ್ನಾಟಕದಾದ್ಯಂತ ನೆಲೆಸಿವೆ. ಈ ಸಮುದಾಯಗಳು ತಮ್ಮದೆಯಾದ ಕುಲಕಸುಬು, ಸಾಮಾಜಿಕ ಹಿನ್ನಲೆ ಐತಿಹಾಸಿಕ ಹಿನ್ನಲೆ ಮತ್ತು ಪೌರಾಣಿಕ ಹಿನ್ನಲೆಯನ್ನು ಹೊಂದಿವೆ. ಇವು ತಮ್ಮದೆಯಾದ ವಿಶಿಷ್ಟ ಆಚಾರ, ವಿಚಾರ, ಆಚರಣೆ, ಸಂಪ್ರದಾಯ, ರೀತಿ, ನೀತಿ ನಂಬಿಕೆಗಳು, ಮೌಲ್ಯಗಳು ಇತ್ಯಾದಿಗಳನ್ನು ಹೊಂದಿವೆ, ಇಂತಹ ವಿಶಿಷ್ಟ ಸಂಸ್ಕೃತಿಯನ್ನು ಈ ಸಮುದಾಯಗಳು ಅದಿಮ ಕಾಲಘಟ್ಟದಿಂದ ಆಧುನಿಕ ಕಾಲಘಟ್ಟದವರೆಗೆ ಕಾಪಾಡಿಕೊಂಡು ಬಂದಿವೆ. ಅಧ್ಯಯನದ ಕ್ಷೇತ್ರವಾದ ಸುರುಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳು ಕೂಡ ತಮ್ಮ ಇಂತಹ ವಿಶಿಷ್ಟ ಸಂಸ್ಕೃತಿಯ ಚಹರೆಗಳನ್ನು ಇಂದಿಗೂ ಉಳಿಸಿಕೊಂಡಿವೆ. ಸಂಸ್ಕೃತೀಕರಣ, ಆಧುನಿಕ ಶಿಕ್ಷಣ, ಇತರ ಧರ್ಮಗಳ ಪ್ರಭಾವ ಇತ್ಯಾದಿ ಪ್ರಕ್ರಿಯೆಗಳ ಮೂಲಕ ಬುಡಕಟ್ಟುಗಳ ವಿಶಿಷ್ಟ ಸಾಂಸ್ಕೃತಿಕ ಚಹರೆಗಳು ಸ್ಥಿತ್ಯಂತರಗೊಳ್ಳುತ್ತಿವೆ. "ವಸಾಹತುಶಾಹಿ ಮತ್ತು ದೇಶೀಯ ಮಧ್ಯವರ್ತಿ ಸಮುದಾಯದ ಮೈತ್ರಿಕೂಟದ ರಾಜಕಾರಣದ ಫಲವಾಗಿ ರೂಪಾಂತರ ಸಂಭವಿಸಿದವು. ಭೂಮಿಯ ಜೊತೆಗಿನ ಈ ಸಮುದಾಯಗಳ ಪಾರಂಪರಿಕ ಅಧಿಕಾರಗಳನಾಶ, ಈ ಬಗೆಯ ಸ್ಥಿತ್ಯಂತರಗಳಿಗೆ ಕಾರಣವಾಯಿತು."[೭]

ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳು ೧೮ನೇ ಶತಮಾನದಲ್ಲಿ ನೇರವಾಗಿ ವಶಹಾತುಶಾಹಿ ಆಡಳಿತಕ್ಕೆ ಒಳಪಡುವುದರ ಜೊತೆಗೆ ಪಾಶ್ಚಾತೀಕರಣದ ಸ್ಪರ್ಶವಾಗಿರುವುದರಿಂದ ಆವಾಗಿನಿಂದಲೇ ಈ ಬುಡಕಟ್ಟುಗಳ ಸ್ಥಿತ್ಯಂತರ ಪ್ರಕ್ರಿಯೆ ನಡೆದಿದೆ. ಈ ಸ್ಥಿತ್ಯಂತರದಿಂದ ಬದಲಾವಣೆಯು ವೇಗವು ಹೆಚ್ಚಾಗಿರುವುದು ಕಂಡುಬರುವುದಿಲ್ಲ. ಆದರೆ

ಇಂದಿನ ಬದಲಾವಣೆಯು ವಿದ್ಯಮಾನವಾದ ಜಾಗತೀಕರಣವು ಖಾಸಗೀಕರಣದಿಂದ ಸರ್ಕಾರದ ಪ್ರಮುಖ ಆಡಳಿತ ಕ್ಷೇತ್ರಗಳನ್ನು ಮತ್ತು ಉದಾರೀಕರಣ ನೀತಿಯಿಂದ ಮಾರುಕಟ್ಟೆಯು ವಶಪಡಿಸಿಕೊಂಡಿದೆ. ಆದರೂ ಸಹ ಈ ಬುಡಕಟ್ಟುಗಳು ಮೀಸಲಾತಿ ಮತ್ತು ಸಣ್ಣ ಸಣ್ಣ ವ್ಯಾಪಾರಗಳಿಂದ ಅನುಕ್ರಮವಾಗಿ ಆಡಳಿತ ಮತ್ತು ಮಾರಕಟ್ಟೆಯನ್ನು ಪ್ರವೇಶಿಸಿವೆ. ವಿಶ್ವಸಂಸ್ಥೆ ತರುವ ಹಲವಾರು ಯೋಜನೆಗಳು, ಕಾರ್ಯಕ್ರಮಗಳು, WTO, World Bank ಗಳಿಂದ ಸರ್ಕಾರಕ್ಕೆ ನೀಡುವ ಸಾಲದಿಂದ, ಸ್ಥಿತ್ಯಂತರದ ವೇಗ ಹೆಚ್ಚಾಗುತ್ತಿದೆ ಹಾಗೂ ಕೃಷ್ಣ ಮೇಲ್ದಂಡೆ ಯೋಜನೆಯು ನೀರಾವರಿ ಸೌಲಭ್ಯದಿಂದ ಜೀತಪದ್ಧತಿ ಮತ್ತು ಜಮೀನ್ದಾರರಿಂದ ಮುಕ್ತಿ ದೊರೆಯುವುದರೊಂದಿಗೆ ಈ ಬುಡಕಟ್ಟು ಸಮುದಾಯಗಳ ಬದುಕು ಸ್ಥಿತ್ಯಂತರಕ್ಕೆ ಒಳಗಾಗಿದೆ. ಅಂದರೆ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಅಷ್ಟೇ ಅಲ್ಲದೆ ಆರೋಗ್ಯದಲ್ಲಿ ಸ್ಥಿತ್ಯಂತರವಾಗಿರುವುದು ಕಾಣುತ್ತೇವೆ. ಈ ಸ್ಥಿತ್ಯಂತರಗಳನ್ನು ಒಂದೊಂದಾಗಿ ವಿವರಿಸಲಾಗಿದೆ.

ಸಾಮಾಜಿಕ ಸ್ಥಿತ್ಯಂತರವೆಂದರೆ ಸಾಮಾಜಿಕ ಸಂಸ್ಥೆಗಳಲ್ಲಿ ಸಾಮಾಜಿಕ ಸಂಬಂಧಗಳಲ್ಲಿ, ಸಾಮಾಜಿಕ ನಿಯಂತ್ರಣದಲ್ಲಿ, ಸಾಮಾಜಿಕ ನ್ಯಾಯದಲ್ಲಿ ಸಾಮಾಜಿಕ ಸಂಘಟನೆಗಳೆಲ್ಲಾದ ಸ್ಥಿತ್ಯಂತರವಾಗಿದೆ. ಈ ಅಧ್ಯಾಯದಲ್ಲಿ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳ ಸಾಮುದಾಯಿಕ ಸಂಸ್ಥೆಗಳಲ್ಲಿ, ಸಾಮುದಾಯಿಕ ನಿಯಂತ್ರಣದಲ್ಲಿ, ಸಾಮಾಜಿಕ ನ್ಯಾಯದಲ್ಲಿ ಮತ್ತು ಸಮುದಾಯದ ಸಂಘಟನೆಗಳಲ್ಲಾದ ಸ್ಥಿತ್ಯಂತರವಾಗಿದೆ.

**ಕುಟುಂಬ ಮತ್ತು ಬುಡಕಟ್ಟು ಸಮುದಾಯಗಳು**

ಬೇಡ ಮತ್ತು ಮೇದ ಬುಡಕಟ್ಟುಗಳಲ್ಲಿ ಕೂಡು ಕುಟುಂಬಗಳು ಇತ್ತೀಚೆಗೆ ಕಡಿಮೆಯಾಗುತ್ತಿವೆ. "ಆದಿವಾಸಿ ಸಮುದಾಯವೊಂದು ಎಲ್ಲಿಯವರೆಗೆ ಪಾರಂಪರಿಕ ಕಸುಬುಗಳಲ್ಲಿ ತೊಡಗಿ ಕೊಂಡಿರುತ್ತದೋ, ಎಲ್ಲಿಯವರೆಗೆ ಸಮುದಾಯದ ಸಾಮಾಜಿಕ ಸಂಬಂಧಗಳನ್ನು ಸಾಂಪ್ರದಾಯಿಕ ಕುಲಮೂಲದ ವೃತ್ತಿಗಳು ನಿಯಂತ್ರಿಸುವವೋ ಅಲ್ಲಿಯವರೆಗೆ ಕುಟುಂಬಗಳು ಅವಿಭಕ್ತವಾಗಿರುತ್ತದೆ. ಕುಟುಂಬದ ಸದಸ್ಯರು ಹೊಸ ಉತ್ಪಾದನಾ ವ್ಯವಸ್ಥೆಯನ್ನು ಕಂಡುಕೊಂಡಾಕ್ಷಣ, ಆ ಉತ್ಪಾದನಾ ವ್ಯವಸ್ಥೆಯೇ ಕುಟುಂಬದ ಸ್ವರೂಪವನ್ನು ಮತ್ತು ಸಾಮಾಜಿಕ ಸಂಬಂಧಗಳನ್ನು ರೂಪಿಸುತ್ತಾ ಹೋಗುತ್ತಿದೆ."[೮] ಬೇಡ ಬುಡಕಟ್ಟಿನ ಕುಲಕಸಬು ಬೇಟೆಯಾದರೆ, ಮೇದ ಬುಡಕಟ್ಟಿನ ಕುಲಕುಸುಬ ಬಿದಿರಿನ ಕೆಲಸವಾಗಿದೆ. ಈ ಎರಡು ಸಮುದಾಯಗಳು ಇವುಗಳ ಜೊತೆಗೆ ಕೃಷಿ ಮತ್ತು ಇನ್ನಿತರ ಉದ್ಯೋಗಗಳನ್ನು ಸಣ್ಣ ಸಣ್ಣ ವ್ಯಾಪಾರಗಳನ್ನು ಮಾಡಲಾರಂಭಿಸಿದ್ದಾರೆ. ಇದರಿಂದಾಗಿ ಈ ಸಮುದಾಯಗಳ ಸ್ವರೂಪವು ಬದಲಾಗುತ್ತಿವೆ. ಪಟ್ಟಣಗಳಿಂದ ದೂರವಿರುವ ಹಳ್ಳಿಗಳಲ್ಲಿಯ ಬೇಡರಲ್ಲಿ ಮತ್ತು ಮೇದರಲ್ಲಿ ಹಾಗೂ ಪಾರಂಪರಿಕ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವ

ಸಮುದಾಯಗಳಲ್ಲಿ ಕೂಡು ಕುಟುಂಬಗಳಿರುವುದು ಕಂಡು ಬರುತ್ತದೆ. ಆದರೆ ಪಟ್ಟಣಕ್ಕೆ ಹತ್ತಿರವಿರುವ ಬೇಡರಲ್ಲಿ ಹಾಗೂ ಪಟ್ಟಣಗಳಲ್ಲಿರುವ ಮತ್ತು ಆಧುನಿಕವಾದ ವಿವಿಧ ಉದ್ಯೋಗಗಳಲ್ಲಿ ತೊಡಗಿರುವ ಬೇಡ ಮತ್ತು ಮೇದ ಸಮುದಾಯಗಳಲ್ಲಿ ವಿಭಕ್ತ ಕುಟುಂಬಗಳು ಹೆಚ್ಚಾಗಿರುವುದು ಕಂಡು ಬರುತ್ತದೆ. ಈ ಎಲ್ಲಾ ಕುಟುಂಬಗಳು ಸಾಮಾನ್ಯವಾಗಿ ಪುರುಷ ಪ್ರಧಾನ ಕುಟುಂಬಗಳಾಗಿವೆ. ನನ್ನ ಅಧ್ಯಯನಕ್ಕಾಗಿ ನಡೆಸಿದ ಬೇಡರ ೧೦೦ ಮನೆಗಳ ಸಮೀಕ್ಷೆಯಲ್ಲಿ ಮತ್ತು ಮೇದರ ೧೦೦ ಮನೆಗಳ ಸಮೀಕ್ಷೆಯಲ್ಲಿ ೨೧ ಬೇಡರ ಅವಿಭಕ್ತ ಕುಟುಂಬಗಳು ಹಾಗೂ ೧೨ ಮೇದ ಅವಿಭಕ್ತ ಕುಟುಂಬಗಳು ಕಂಡು ಬರುತ್ತವೆ. ಬೇಡರಲ್ಲಿ ಶೇ ೭೯ ವಿಭಕ್ತ ಕುಟುಂಬಗಳು ಮತ್ತು ಮೇದರಲ್ಲಿ ಶೇ ೮೮ ವಿಭಕ್ತ ಕುಟುಂಬಗಳಿವೆ. ಒಟ್ಟಾರೆಯಾಗಿ ೮೩.೫ ರಷ್ಟು ವಿಭಕ್ತ ಕುಟುಂಬಗಳಿರುವುದು ಕಂಡು ಬರುತ್ತದೆ. ಈ ಎಲ್ಲಾ ಕುಟುಂಬಗಳಲ್ಲಿ ಪುರುಷನೇ ಮನೆಯ ಯಜಮಾನ. ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವವನು ಪುರುಷನೆ ಎಂಬುದು ಕ್ಷೇತ್ರದ ಸಮೀಕ್ಷೆಯಿಂದ ತಿಳಿಯುತ್ತದೆ. ನಾನು ಸಂದರ್ಶಿಸಿದ ವ್ಯಕ್ತಿಗಳನ್ನು, ಈ ಹಿಂದೆ ಕುಟುಂಬದ ಮುಖ್ಯ ತೀರ್ಮಾನಗಳನ್ನು ಯಾರು ತೆಗೆದುಕೊಳ್ಳುತ್ತಿದ್ದರು ? ಎಂದು ಪ್ರಶ್ನಿಸಲಾಗಿತ್ತು. ಬಹುಪಾಲು ಸಂದರ್ಶಿತ ಕುಟುಂಬಗಳು, ಈ ಹಿಂದೆ ಮನೆಯ ಹಿರಿಯರು, ತಂದೆತಾಯಿ ಎಲ್ಲರೂ ಸೇರಿ ಚರ್ಚಿಸಿದರೂ ನಿರ್ಣಯಗಳನ್ನು ತೆಗೆದುಕೊಳ್ಳುವ ತೀರ್ಮಾನ ಅಂತಿಮವಾಗಿ ಮನೆಯ ಯಜಮಾನನದೇ ಆಗಿರುತ್ತಿತ್ತು. ಈ ಎರಡು ಸಮುದಾಯಗಳಲ್ಲಿ ಯಜಮಾನನು ತೆಗೆದುಕೊಳ್ಳುವ ನಿರ್ಣಯಗಳನ್ನು ಜಾರಿ ಮಾಡುವ ಸಲುವಾಗಿ ಕುಟುಂಬದ ಸದಸ್ಯರು ಎಲ್ಲರು ಸೇರಿ ಸಾಮೂಹಿಕ ಚರ್ಚೆ ಮಾಡುತ್ತಿದ್ದಾರೆ ವಿನಹ ಯಜಮಾನನ ನಿರ್ಣಯಗಳ ಮೇಲೆ ಕುಟುಂಬದ ಸದಸ್ಯರು ಪ್ರಭಾವ ಬೀರಿ ಅದನ್ನು ಬದಲಾಯಿಸುತ್ತಿದ್ದುದ್ದು ಅತ್ಯಂತ ಅಪರೂಪದ ಮತ್ತು ವಿರಳ ಸಂದರ್ಭಗಳಲ್ಲಿ ಮಾತ್ರ.

ಆದರೆ ಇಂದು ಮನೆಯ ಯಜಮಾನ ಕುಟುಂಬದ ಮುಖ್ಯ ಸಂಗತಿಗಳ ಕುರಿತು ನಿರ್ಣಯ ತೆಗೆದುಕೊಳ್ಳುವಾಗ ಮನೆಯ ಹೆಣ್ಣು ಮಕ್ಕಳ ಅಭಿಪ್ರಾಯ ಪಡೆಯುತ್ತಾರಾ ? ಎಂದು ಪ್ರಶ್ನಿಸಲಾಗಿತ್ತು. ಒಟ್ಟಾರೆಯಾಗಿ ಬೇಡರಲ್ಲಿ ೧೫ ಜನ ಮತ್ತು ಮೇದರಲ್ಲಿ ೧೫ ಜನರನ್ನು ಸಂದರ್ಶಿಸಿದ್ದೇನೆ. ಅದರಲ್ಲಿ ಈ ಪ್ರಶ್ನೆಗೆ ಬೇಡರಲ್ಲಿ ೭ ಜನರು ಮನೆಯ ಯಜಮಾನ ತಮ್ಮ ಅಭಿಪ್ರಾಯ ಕೇಳುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಮಾತ್ರ ಕೇಳಬೇಕಾಗುತ್ತದೆ ಎಂದು ಉತ್ತರಿಸಿದರು.

ಆದರೆ ೫ ಜನರು ಸಾಮೂಹಿಕವಾಗಿ ಸೇರಿ ನಿರ್ಣಯಗಳನ್ನು ತೆಗೆದುಕೊಳ್ಳುತ್ತೇವೆ ಎಂದು ಹೇಳಿದರೆ ಇನ್ನೂ ಮೂರು ಜನರು ಉತ್ತರ ನೀಡುವಲ್ಲಿ ತಟಸ್ಥರಾದರು. ಮೇದರಲ್ಲಿಯ

೧೫ ಜನರಲ್ಲಿ ೮ ಜನರು ಅಭಿಪ್ರಾಯಗಳನ್ನು ಕೇಳುತ್ತಾನೆ ಎಂದು ಹೇಳಿದರೆ, ೬ ಜನರು ಅಭಿಪ್ರಾಯಗಳನ್ನು ಕೇಳುವುದಿಲ್ಲ ಎಂದು ಹೇಳಿದರು.

ಅಂದರೆ ಬೇಡರಲ್ಲಿ ೪೬.೬% ಜನರು ಯಜಮಾನನು ತಮ್ಮ ಅಭಿಪ್ರಾಯಗಳನ್ನು ಕೇಳುವುದಿಲ್ಲ, ಆದರೆ ಕೆಲವು ಸಂಧರ್ಭಗಳಲ್ಲಿ ಮಾತ್ರ ಕೇಳುತ್ತಾನೆ ಎಂದು ಹೇಳಿದರೆ. ಶೇ ೩೩ ಜನರು ತಮ್ಮ ಅಭಿಪ್ರಾಯವೇ ಕೇಳುವುದಿಲ್ಲ ಎಂದು ಹೇಳುವರು. ಇನ್ನೂಳಿದ ೨೦% ಜನರು ನಿರುತ್ತರಿಗಳಾಗಿದ್ದಾರೆ. ಇದರಿಂದ ಕುಟುಂಬದ ಮುಖ್ಯಸ್ಥನು ಕುಟುಂಬದ ಹೆಣ್ಣು ಮಕ್ಕಳ ಅಭಿಪ್ರಾಯಗಳನ್ನು ಕೇಳುವುದಿಲ್ಲ ಎಂಬುದು ಸ್ಪಷ್ಟವಾಗುವುದು. ಇದರಿಂದ ಬೇಡ ಮಹಿಳೆಯರು ಕುಟುಂಬದ ತೀರ್ಮಾನಗಳನ್ನು ತೆಗೆದುಕೊಳ್ಳುವಲ್ಲಿ ಸ್ವಾತಂತ್ರ್ಯವನ್ನು ಪಡೆದುಕೊಂಡಿಲ್ಲವೆಂಬುದು ತಿಳಿಯುತ್ತದೆ.

ಈ ಮೇಲಿನ ಪ್ರಶ್ನೆಗೆ ಮೇದರಲ್ಲಿ ಶೇ ೫೩ರಷ್ಟು ಜನರು ಯಜಮಾನ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಅಭಿಪ್ರಾಯಗಳನ್ನು ಕೇಳುತ್ತಾನೆ ಎಂದು ಹೇಳಿದರೆ, ಶೇ ೪೦% ಜನರು ಅಭಿಪ್ರಾಯಗಳನ್ನು ಕೇಳುವುದಿಲ್ಲ ಎಂದು ಹೇಳಿದರು.

ಆದರೆ ಇದಕ್ಕಿಂತಲೂ ಮೊದಲು ಎರಡು ಸಮುದಾಯಗಳಲ್ಲಿಯು ಅಭಿಪ್ರಾಯಗಳನ್ನು ಕೇಳುತ್ತಿರಲಿಲ್ಲ ಎಂಬುದು ಎರಡು ಸಮುದಾಯಗಳ ಸಂದರ್ಶನದಿಂದ ಮತ್ತು ಸಮೀಕ್ಷೆಯಿಂದ ತಿಳಿದು ಬರುತ್ತದೆ. ಆದರೆ ಇಂದು ಸ್ತ್ರೀಯು ಶಿಕ್ಷಣ, ಹೊರಗಿನ ಕೆಲಸಗಳಿಂದ ಮತ್ತು ದೂರದರ್ಶನದ ಪ್ರಭಾವದಿಂದ ಎಚ್ಚರಗೊಂಡು ಸ್ತ್ರೀಯು ಪುರುಷನಿಗೆ ಸವಾಲಾಗಿ ನಿಲ್ಲಿಸುತ್ತಿದ್ದಾಳೆ. ಇದರಿಂದ ಈ ಪ್ರಮಾಣದಲ್ಲಿಯಾದರು ಕೂಡ ಕುಟುಂಬದ ತೀರ್ಮಾನವನ್ನು ತೆಗೆದುಕೊಳ್ಳುವಾಗ ಸ್ತ್ರೀಯರ ಅಭಿಪ್ರಾಯ ಕೇಳುತ್ತಿದ್ದಾರೆ. ಆದರೆ ಈ ಅಭಿಪ್ರಾಯ ಕೇವಲ ಔಪಚಾರಿಕವಾಗಿರುತ್ತದೆ. ಎಲ್ಲಾ ನಿರ್ಣಯಗಳು ಪುರುಷನ ಅಂತಿಮ ನಿರ್ಧಾರಗಳೇ ಆಗಿರುತ್ತವೆ.

ಬೇಡ ಬುಡ್ಡಕಟ್ಟಿನವರು ಸಾಮಾನ್ಯ ಕೃಷಿ, ಕೃಷಿಕೂಲಿ ಮತ್ತು ಇತರ ಹಲವಾರು ಉದ್ಯೋಗಗಳು ಹಾಗೂ ಸಣ್ಣ ವ್ಯಾಪಾರಗಳಲ್ಲಿ ತೊಡಗಿರುತ್ತಾರೆ. ಅದರಂತೆ ಮೇದರು ಕುಲಕಸುಬು ಮತ್ತು ಇತರ ಹಲವಾರು ಉದ್ಯೋಗ ಮತ್ತು ಸಣ್ಣ ವ್ಯಾಪಾರಗಳಲ್ಲಿ ತೊಡಗಿರುತ್ತಾರೆ. ಈ ಸಮುದಾಯಗಳ ಹೆಣ್ಣು ಗಂಡುಗಳಿಬ್ಬರು ಇಂತಹ ಕೆಲಸಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ಹೆಣ್ಣು ಮಕ್ಕಳು ಬೆಳಗಿನ ಹೊತ್ತು ಮನೆಗೆಲಸ ನಂತರ ಕುಟುಂಬದ ನಿರ್ವಹಣೆಗಾಗಿ ಮಾಡುವ ಕೂಲಿ ಕೆಲಸ ಅನಂತರ ಮತ್ತೆ ಸಂಜೆಯ ವೇಳೆ ಗೃಹಕೃತ್ಯದ ದಿನವಹಿ ಕೆಲಸಕಾರ್ಯಗಳು ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹಿಳೆ ಪುರುಷನಿಗಿಂತ ಹೆಚ್ಚಾಗಿ ದಿನನಿತ್ಯ ತನ್ನನ್ನು ತೊಡಗಿಸಿಕೊಳ್ಳುತ್ತಾಳೆ.

ಬೆಳಗಿನ ಜಾವ ಹೊತ್ತು ಹುಟ್ಟುವ ಮುನ್ನ ಪ್ರಾರಂಭವಾಗುವ ಹೆಣ್ಣಿನ ದುಡಿಮೆ ರಾತ್ರಿ ಮಲಗುವ ತನಕ ನಿರಂತರವಾಗಿರುತ್ತದೆ. ಆದರೆ ಗಂಡಸರ ದುಡಿಮೆ ಇಷ್ಟು ಸುದೀರ್ಘವಾಗಿರುವುದಿಲ್ಲ. ದಣಿದರೆ ಸಂಜೆಯ ವೇಳೆ ಗೆಳೆಯರ ಜೊತೆ ಆಯಾಸದ ಪರಿಹಾರಕ್ಕೆ ಅನೇಕ ಮಾರ್ಗಗಳನ್ನು ಕಂಡುಕೊಳ್ಳುವ ಅವಕಾಶ ಪುರುಷರಿಗಿದೆ. ಆದರೆ ಮನೆಗೆ ಬಂದ ತಕ್ಷಣ ಅಡುಗೆ, ಮಕ್ಕಳ ಪಾಲನೆ, ಮನೆಯಲ್ಲಿ ವಯಸ್ಸಾದ ಹಿರಿಯರ ಪೋಷಣೆಗಳೆಲ್ಲ ಮಹಿಳೆಯರ ಹೆಗಲೇರುತ್ತವೆ. ಇದು ಸ್ತ್ರೀ ಪುರುಷರ ನಡುವೆ ಅಸಮಾನವಾಗಿ ಹಂಚಿಕೆಯಾದ ಶ್ರಮವಿಭಜನೆ. ಮನೆಗೆಲಸದ ಜೊತೆಗೆ ಕುಟುಂಬದ ಆರ್ಥಿಕತೆಯನ್ನು ಸರಿದೂಗಿಸುವ ಸಲುವಾಗಿ ಗಂಡನ ಜೊತೆ ಗದ್ದೆಗಳಲ್ಲಿ, ತೋಟಗಳಲ್ಲಿ ಅವರ ಸರಿಸಮನಾಗಿ ದುಡಿಯುವಳು. ದುಡಿದ ಕೂಲಿಯ ಮೇಲೆ ಯಾವ ಬಗೆಯ ಅಧಿಕಾರವೂ ಇಲ್ಲದಂತೆ ಬದುಕುವುದು ಕೆಳಜಾತಿ ಮತ್ತು ಆದಿವಾಸಿಗಳಂತಹ ದುಡಿದ ವರ್ಗದ ಮಹಿಳೆಯ ಸ್ಥಿತಿಗತಿಯಾಗಿದೆ.

ಇಂದು ಕುಟುಂಬದ ಆಗು ಹೋಗುಗಳಿಗೆ, ದಿನ ನಿತ್ಯದ ಬದುಕಿನ ಅವಶ್ಯಕತೆಗಳನ್ನು ಕುರಿತು, ಕುಟುಂಬದ ಆರ್ಥಿಕತೆಯ ಕುರಿತು ಪುರುಷನು ಕುಟುಂಬವನ್ನು ಸಮರ್ಥವಾಗಿ ಮುನ್ನೆಡೆಸಲು ಸ್ತ್ರೀಯು ಪುರುಷನಿಗೆ ಮಾರ್ಗದರ್ಶನ ಮಾಡುತ್ತಾಳೆ. ಕುಟುಂಬದ ಮುಖ್ಯ ತೀರ್ಮಾನಗಳು ತೆಗೆದುಕೊಳ್ಳುವಾಗ ಕುಟುಂಬದ ಯಜಮಾನನು ತನ್ನ ಹೆಂಡತಿಯ ಅಭಿಪ್ರಾಯವು ಕೇಳುತ್ತಿದ್ದಾನೆ.

ಇಂದಿನ ಅವಿಭಕ್ತ ಕುಟುಂಬಗಳನ್ನು ಪುರುಷನೇ ಮುನ್ನಡೆಸುತ್ತಿರುವುದು ತಿಳಿಯುತ್ತದೆ. ಇಲ್ಲಿಯು ಕೂಡ ಮುಖ್ಯ ತೀರ್ಮಾನಗಳು ಪುರುಷನೆ ತೆಗೆದುಕೊಳ್ಳುವನು. ಆದರೆ ಅವಿಭಕ್ತ ಕುಟುಂಬದ ಸದಸ್ಯರಾದ ಸುರಪುರದ ಹನಮಂತಪ್ಪ ಮಾಸ್ತರರನ್ನು ಕೇಳಿದಾಗ ಕೆಲವು ಸಂದರ್ಭಗಳಲ್ಲಿ ಸ್ತ್ರೀಯರನ್ನು ಕೇಳಬೇಕಾಗುತ್ತದೆ ಎಂದು ಹೇಳುವರು.

ಒಟ್ಟಾರೆಯಾಗಿ ಈ ಎರಡು ಸಮುದಾಯಗಳ ಕುಟುಂಬದ ಗಾತ್ರದಲ್ಲಿ, ಯಜಮಾನನ ಅಧಿಕಾರ ಮತ್ತು ಅಭಿಪ್ರಾಯಗಳಲ್ಲಿ, ಸ್ತ್ರೀಯರ ಸ್ಥಾನಮಾನದಲ್ಲಿ, ಬದುಕಿನ ರೀತಿ ಬದಲಾವಣೆಯಾಗಿರುವುದು ಕಂಡುಬರುತ್ತದೆ. ಸಂದರ್ಶಿಸಿದ ಕುಟುಂಬಗಳಿಗೆ ನಿಮ್ಮ ಸಮುದಾಯದ ಕುಟುಂಬಗಳ ಸ್ವರೂಪ ಬದಲಾಗುತ್ತಿದೆಯೇ? ಎಂದು ಪ್ರಶ್ನಿಸಿದಾಗ, ಬೇಡ ಸಮುದಾಯ ೧೫ ಜನರ ವ್ಯಕ್ತಿ ಅಧ್ಯಯನದಲ್ಲಿ ೯ ಜನರು ಬದಲಾಗುತ್ತಿದೆ ಎಂದು ಹೇಳಿದರೆ, ಮೇದರ ವ್ಯಕ್ತಿ ಅಧ್ಯಯನದ ೧೫ ಜನರಲ್ಲಿ ೧೦ ಜನರು ಬದಲಾಗುತ್ತಿದೆ ಎಂದು ಉತ್ತರಿಸಿದರು. ಶೇ ೬೦% ಜನರು ಬೇಡ ಸಮುದಾಯದ ಕುಟುಂಬದ ಸ್ವರೂಪದಲ್ಲಿ ಬದಲಾಗುತ್ತಿದೆ ಎಂದು ಹೇಳಿದರೆ, ಶೇ ೬೬% ಜನರು ಮೇದ ಸಮುದಾಯದ ಕುಟುಂಬಗಳ ಸ್ವರೂಪದಲ್ಲಿ ಬದಲಾಗುತ್ತಿದೆ

ಎಂದು ಹೇಳಿದರು. ಅಂದರೆ ಕುಟುಂಬದ ಸ್ವರೂಪದ ಬದಲಾವಣೆಯಲ್ಲಿ ಮೇದ ಸಮುದಾಯವು ಮುಂದಿರುವುದು ಸಂದರ್ಶನ ಮತ್ತು ಸಮೀಕ್ಷೆಯಿಂದ ಮತ್ತು ಕ್ಷೇತ್ರಕಾರ್ಯದ ಅವಲೋಕನದಿಂದ ತಿಳಿಯುತ್ತದೆ. ಒಟ್ಟಾರೆಯಾಗಿ ಎರಡು ಸಮುದಾಯಗಳಲ್ಲಿ ಕೌಟುಂಬಿಕ ಸ್ವರೂಪದಲ್ಲಿ ಸ್ಥಿತ್ಯಂತರವಾಗಿದೆ. ಇಂತಹ ಕುಟುಂಬದ ಸ್ವರೂಪದಲ್ಲಾದ ಬದಲಾವಣೆಗೆ ಕಾರಣಗಳನ್ನು ಕೇಳಿದಾಗ ಈ ಕೆಳಗಿನ ಉತ್ತರಗಳು ನೀಡಿರುವರು.

೧. ಬೇರೆ ಬೇರೆ ಕಡೆ ಕೆಲಸಗಳು ದೊರೆಯುವುದರಿಂದ ಸರಿಯಾಗಿ ಆದಾಯ ಸಿಗುತ್ತದೆ.

೨. ಶಾಲೆ ಕಲಿತು ಇಂದಿನ ಜನರು ಹುಶಾರಾಗಿದ್ದಾರೆ.

೩. ಸಿನಿಮಾದಾಗ ಮಾಡಿದಂಗೆ ಇವರು ಮಾಡುತ್ತಾರೆ.

೪. ಕಾಲ ಬದಲಾವಣೆ ಇದನ್ನು ಬದಲಾಗುವುದು ಎಂದು ಉತ್ತರಿಸಿರುವರು.

ಈ ಉತ್ತರಗಳಿಂದ, ಶಿಕ್ಷಣ, ಸಮೂಹ ಮಾಧ್ಯಮಗಳು, ದುಡಿಯುವ ಅವಕಾಶಗಳು ಹೆಚ್ಚಾಗಿರುವುದು, ಕಾಲಮಾನಕ್ಕನುಗುಣವಾಗಿ, ಆರ್ಥಿಕತೆಯಲ್ಲಿ ಮತ್ತು ಜೀವನ ಶೈಲಿಯಲ್ಲಿ ಬದಲಾವಣೆ ಆದಂತೆ ಕುಟುಂಬದ ಸ್ವರೂಪದಲ್ಲಿಯೂ ಬದಲಾವಣೆಯಾಗುವುದು. ಇವುಗಳು ಅಷ್ಟೆ ಅಲ್ಲದೆ ಆ ಪ್ರದೇಶದಲ್ಲಿಯ ನೀರಾವರಿ ಸೌಲಭ್ಯಗಳು, ಕೃಷಿ ಬಳಕೆಯ ಉಪಕರಣಗಳಲ್ಲಾದ ಮತ್ತು ಕೃಷಿಯ ವಿಧಾನಗಳಲ್ಲಾದ ಬದಲಾವಣೆ, ರಾಜಕೀಯ ಪ್ರಜ್ಞೆಯು ಮೂಡುತ್ತಿದ್ದು ಕೆಲವರು ಸರ್ಕಾರಿ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಇವೆಲ್ಲವುಗಳಿಂದ ಕುಟುಂಬದ ಸ್ವರೂಪವು ಬದಲಾಗಿರುವುದು ಕಂಡು ಬರುತ್ತದೆ.

**ಬುಡಕಟ್ಟು ಸಮುದಾಯಗಳು ಮತ್ತು ಇತರ ಜಾತಿಗಳು**

ಆಧುನಿಕ ಮಾನವಶಾಸ್ತ್ರಜ್ಞರು ಮುಖ್ಯವಾಹಿನಿ ಸಮಾಜ ಮತ್ತು ಬುಡಕಟ್ಟು ಸಮಾಜ ಎಂಬ ಸಮಾಜದ ವರ್ಗೀಕರಣ ಮಾಡಿದ್ದಾರೆ. ಈ ಮುಖ್ಯವಾಹಿನಿ ಸಮಾಜವೆಂಬ ಸಮಾಜದ ಸಂಪರ್ಕದಿಂದ ಬುಡಕಟ್ಟು ಸಮುದಾಯಗಳು ಜಾತಿಗಳಾಗಿ ಮಾರ್ಪಟ್ಟವು. ಹೆಚ್ಚಾಗಿ ಇವು ಜಾತಿಯ ಶ್ರೇಣಿಯಲ್ಲಿ ಕೆಳಸ್ಥಾನದಲ್ಲಿವೆ. ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಕೂಡ ಜಾತಿಗಳಾಗಿ ಮಾರ್ಪಟ್ಟು, ಸಮಾಜದ ಜಾತಿಯ ಶ್ರೇಣಿಯಲ್ಲಿ ಕೆಳಸ್ತಾನದಲ್ಲಿವೆ. ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಲಿಂಗಾಯತರು, ಕುರುಬರು, ಕಬ್ಬಲಿಗರು, ಉಪ್ಪಾರರು, ಮಾರವಾಡಿಗಳು, ಬ್ರಾಹ್ಮಣರು, ರೆಡ್ಡಿಗಳು ಮತ್ತು ದಲಿತ ಜಾತಿಗಳು, ಇತ್ಯಾದಿ ಜಾತಿಗಳು ಇರುವುದನ್ನು ಕಾಣುತ್ತೇವೆ. ಈ ಜಾತಿಗಳಲ್ಲಿ ಸಾಮಾನ್ಯವಾಗಿ ಮೇಲ್ಜಾತಿಗಳು ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳನ್ನು ಕೆಳಜಾತಿಗಳು, ತುಚ್ಚ ಜಾತಿಗಳೆಂಬ

ಭಾವನೆಯನ್ನು ಹೊಂದಿದ್ದವು. ಮೇಲ್ಜಾತಿಗಳು ಸಾಮಾನ್ಯವಾಗಿ ಜಮೀನ್ದಾರರಿಂದ ಕೂಡಿದ್ದವು. ಇವುಗಳು ಹಲವಾರು ವರ್ಷಗಳ ಹಿಂದೆ ಬೇಡ ಮತ್ತು ಮೇದ ಸಮುದಾಯದ ವ್ಯಕ್ತಿಗಳನ್ನು ಜೀತದಾಳುಗಳನ್ನಾಗಿ ಇಟ್ಟುಕೊಂಡಿದ್ದವು ಮತ್ತು ಈ ಸಮುದಾಯಗಳನ್ನು ಅಸ್ಪೃಶ್ಯತೆಯಿಂದ ನೋಡುತ್ತಿದ್ದವು. ಆದರೆ ಇಂದು ಈ ಸಮುದಾಯಗಳ ಇಂತಹ ಸಂಬಂಧಗಳಲ್ಲಿ ಬದಲಾವಣೆಯಾಗಿರುವುದು ಕಂಡು ಬರುತ್ತದೆ. ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿದ ವ್ಯಕ್ತಿಗಳಿಗೆ, ನಿಮ್ಮ ಸುತ್ತ ಬದುಕುತ್ತಿರುವ ಇತರ ಜಾತಿಗಳು ನಿಮ್ಮನ್ನು ಯಾವ ಬಗೆಯಲ್ಲಿ ನಡೆಸಿಕೊಳ್ಳುತ್ತಿವೆ? ಎಂದು ಪ್ರಶ್ನಿಸಿದಾಗ, ಬೇಡ ಸಮುದಾಯದ ಶೇ ೩೩.೩ ರಷ್ಟು ಜನರು ತಮ್ಮನ್ನು ಇತರ ಜಾತಿಯವರು ಉತ್ತಮ ರೀತಿಯಲ್ಲಿ ನಡೆಸಿಕೊಳ್ಳುತ್ತದೆ ಎಂದು ಹೇಳಿದರೆ, ೨೦% ಜನರು ಇತರ ಜಾತಿಗಳಿಗೂ ನಮಗೂ ಯಾವ ಸಂಬಂಧವಿಲ್ಲ ಎಂದು ಉತ್ತರಿಸಿದರು. ಇನ್ನೂಳಿದ ಶೇ ೪೬.೬% ಜನರು ನಾವು ಕೆಳಜಾತಿಯವರಾದ್ದರಿಂದ ನಮ್ಮನ್ನು ಕೆಳಜಾತಿಯವರನ್ನು ನೋಡಿಕೊಳ್ಳುವ ರೀತಿಯಲ್ಲಿ ನಡೆಸಿಕೊಳ್ಳುತ್ತಾರೆ ಎಂದು ಹೇಳಿದರು. ಆದರೆ ಮೇದ ಸಮುದಾಯದ ಶೇ ೪೬.೬% ಜನರು ಇತರ ಸಮುದಾಯದವರು ನಮ್ಮನ್ನು ಉತ್ತಮ ರೀತಿಯಲ್ಲಿ ನಡೆಸಿಕೊಳ್ಳುತ್ತಾರೆ ಎಂದು ಹೇಳಿದರೆ. ಶೇ ೩೩.೩% ಜನರು ಇತರ ಜಾತಿಗಳಿಗೂ ನಮಗೂ ಯಾವುದೇ ಸಂಬಂಧವಿಲ್ಲ ಅವರಷ್ಟಕ್ಕೆ ಅವರು, ನಮ್ಮಷ್ಟಕ್ಕೆ ನಾವು ಎಂದು ಉತ್ತರಿಸಿದರು. ಆದರೂ ೨೦% ಜನರು ನಾವು ಕೆಳಜಾತಿಯವರಾದದ್ದರಿಂದ ನಮ್ಮನ್ನು ಕೆಳಜಾತಿಯವರಂತೆ ನಡೆಸಿಕೊಳ್ಳುತ್ತಾರೆ ಎಂದು ಉತ್ತರಿಸಿದರು.

ಈ ಎರಡು ಸಮುದಾಯಗಳಲ್ಲಿ ಕೆಳಜಾತಿಯ ಭಾವನೆಗಳಿವೆ ಎಂದು ತಿಳಿಯುವುದು. ಆದರೆ ಮೇದರಿಗಿಂತ ಬೇಡರಲ್ಲಿ ಕೆಳಜಾತಿಯ ಭಾವನೆ ಅಧಿಕವಾಗಿರುವುದು ಕಂಡು ಬರುತ್ತದೆ. ಅಷ್ಟೆ ಅಲ್ಲದೆ ಈ ಸಮುದಾಯಗಳು ಇತರ ಜಾತಿಗಳೊಂದಿಗೆ ಉತ್ತಮ ಸಂಬಂಧವನ್ನು ಹೊಂದುವ ತವಕದಲ್ಲಿದಾಗ್ಯೂ ಕೂಡ ಸ್ವಾವಲಂಬಗಳಾಗಲು ಬಯಸುತ್ತಿವೆ. ಆದರೆ ಇದರಲ್ಲಿ ಮೇದ ಸಮುದಾಯವು ಬೇಡ ಸಮುದಾಯಕ್ಕಿಂತ ಒಂದು ಹೆಜ್ಜೆ ಮುಂದಿರುವುದು ಈ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಈ ಎರಡು ಸಮುದಾಯಗಳು ಇತರ ಸಮುದಾಯಗಳಿಗೆ ಹೊಲಿಸಿದರೆ ಹಿಂದುಳಿದಿರುವುದು ತಿಳಿಯುತ್ತದೆ. ಈ ಸಮುದಾಯಗಳ ಸದಸ್ಯರನ್ನು, ನಿಮ್ಮ ಸುತ್ತ ಬದುಕುತ್ತಿರುವ ಇತರೆ ಜಾತಿಗಳಿಗಿಂತ ನಿಮ್ಮ ಜಾತಿಯು ಹಿಂದುಳಿದಿದೆ ಎಂದು ಭಾವಿಸುವಿರಾ? ಎಂದು ಪ್ರಶ್ನಿಸಿದಾಗ, ಬೇಡ ಸಮುದಾಯದ ಶೇ ೨೦% ಜನರು ನಮ್ಮ ಜಾತಿ ಹಿಂದುಳಿದಿಲ್ಲ ಎಂದು ಹೇಳಿದರೆ, ಶೇ ೫೩.೩% ರಷ್ಟು ಜನರು ಹಿಂದುಳಿದಿದೆ ಎಂದು ಉತ್ತರಿಸಿದರು. ಆದರೆ

೨೬.೬% ಜನರು ಹಾಗೇನು ಇಲ್ಲ, ಗೊತ್ತಿಲ್ಲ ಎಂಬ ಹಾರಿಕೆಯ ಉತ್ತರ ಹೇಳಿದರು. ಮೇದ ಸಮುದಾಯದ ಶೇ ೨೬.೬% ರಷ್ಟು ಜನರು ನಾವು ಇತರ ಸಮುದಾಯಗಳಿಗಿಂತ ಹಿಂದುಳಿದಿಲ್ಲ ಎಂದು ಹೇಳಿದರೆ, ಶೇ ೨೦% ಜನರು ಉತ್ತರಿಸದೇ ತಟಸ್ಥವಾಗಿದ್ದರು. ಇನ್ನೂಳಿದ ೫೩.೩% ಜನರು ಇತರ ಸಮುದಾಯಗಳಿಗಿಂತ ತಮ್ಮ ಸಮುದಾಯವು ಹಿಂದುಳಿದಿದೆ ಎಂದು ಉತ್ತರಿಸಿದರು. ಈ ಸಮುದಾಯ ಹಿಂದುಳಿದಿರುವುದಕ್ಕೆ ಕಾರಣಗಳನ್ನು ಕೇಳಿದಾಗ ಈ ಮುಂದಿನ ಕಾರಣಗಳನ್ನು ಹೇಳಿದರು.

೧. ಮೇದರ ನಮ್ಮ ಕುಲಕಸುಬಿನಿಂದ ಆದಾಯ ಕಡಿಮೆ ಬರುತ್ತದೆ. ಇದು ದಿನನಿತ್ಯದ ಬದುಕು ಸಾಗಿಸಲು ಮಾತ್ರ ಸಾಕಾಗುತ್ತದೆ.

೨. ನಮ್ಮ ಸಮುದಾಯದವರಿಗೆ ಹೊಲ (ಕೃಷಿ ಭೂಮಿ) ಇರುವುದಿಲ್ಲ. ಇದ್ದರೂ ಸಣ್ಣ ಭೂಹಿಡುವಳಿಯಾಗಿದ್ದು, ಫಲವತ್ತಾದ ಭೂಮಿಯಾಗಿರುವುದಿಲ್ಲ. ಆದ್ದರಿಂದ ಊರಿನ ಗೌಡ, ಕುಲಕರ್ಣಿ, ಸಾಹುಕಾರರ ಮತ್ತು ಜಮೀನುದಾರರ ಮನೆಯಲ್ಲಿಯೇ ದುಡಿಯಬೇಕಾಗುತ್ತದೆ. ಇವರು ಕೊಡುವ ಕೂಲಿಯು ಊಟಕ್ಕೆ ಮತ್ತು ಬಟ್ಟೆಗೆ ಸರಿ ಹೋಗುತ್ತದೆ.

೩. ನಮ್ಮ ಸಮುದಾಯದವರು ಹೆಚ್ಚಾಗಿ ದುಶ್ಚಟಗಳಾದ ಕುಡಿಯುವುದು, ತಂಬಾಕು ಸೇವಿಸುವ ಚಟಗಳಿಗೆ ಬಲಿಯಾಗುತ್ತಾರೆ. ದುಡಿದದ್ದರಲ್ಲೆ ಅರ್ಧ ಹಣ ಇದಕ್ಕೆ ಇಟ್ಟು ಸಾಹುಕಾರ, ಜಮೀನ್ದಾರರ ಹತ್ತಿರ ಸಾಲ ಮಾಡುತ್ತಾರೆ. ಸಾಲ ಮುಟ್ಟಿಸುವುದೇ ಆಗುವುದಿಲ್ಲ.

೪. ನಾವು ಬಡವರಾಗಿದ್ದೇವೆ ಅದಕ್ಕಾಗಿ ಹಿಂದುಳಿದಿದ್ದೇವೆ.

೫. ನಮ್ಮ ಸಮುದಾಯದವರಲ್ಲಿ ಬಹಳಷ್ಟು ಜನರು ಶಾಲೆ ಕಲಿತ್ತಿಲ್ಲ.

ಕುಲಕಸುಬನ್ನು ಆಧ್ರರಿಸಿರುವುದರಿಂದ, ಕೃಷಿಭೂಮಿ ಇಲ್ಲದೆ ಇರುವುದು, ಸಮುದಾಯದವರು ದುಶ್ಚಟಗಳಿಗೆ ಬಲಿಯಾಗುವುದು, ಇವರ ಬಡತನ, ಶಿಕ್ಷಣದ ಕೊರತೆ ಇತ್ಯಾದಿಗಳು ಇತರ ಜಾತಿಗಳಿಗಿಂತ ಈ ಸಮುದಾಯಗಳು ಹಿಂದುಳಿಯಲು ಕಾರಣಗಳಾಗಿವೆ ಎಂದು ತಿಳಿಯುತ್ತದೆ. ಆದ್ದರಿಂದ ಈ ಸಮುದಾಯಗಳು ಕುಲಕಸುಬನ್ನು ಕೃಷಿ ಕೆಲಸಗಳನ್ನು ಬಿಟ್ಟು ಬೇರೆ ಬೇರೆ ಉದ್ಯೋಗಗಳನ್ನು, ವ್ಯಾಪಾರಗಳನ್ನು ಮಾಡುತ್ತಿದ್ದಾರೆ. ಅಲ್ಲದೆ ಶಿಕ್ಷಿತರಾಗಿ ಸರ್ಕಾರಿ ಹುದ್ದೆಗಳು ಪಡೆಯಬೇಕೆಂಬ ಆಕಾಂಕ್ಷೆಯನ್ನು ಹೊಂದಿದ್ದಾರೆ. ಬೇರೆ ಸಮುದಾಯದಂತೆ ತಾವು ಕೂಡ ಮುಂದುವರೆಯಬೇಕು. ಆ ಸಮುದಾಯಗಳಿಗೆ ಸಮನಾಗಿ ನಿಲ್ಲಬೇಕು ಎಂಬ ಕಾರಣಕ್ಕಾಗಿ ಸುತ್ತಮುತ್ತ ಬದುಕುತ್ತಿರುವ ಇತರ ಜಾತಿಗಳ ಅಥವಾ ಮೇಲ್ಜಾತಿಗಳನ್ನು ಅನುಸರಿಸುತ್ತಾ

ಈ ಸಮುದಾಯಗಳು ಸಂಸ್ಕೃತೀಕರಣ ಪ್ರಕ್ರಿಯೆಗೆ ಒಳಗಾಗುತ್ತಿವೆ. ಇಡೀ ಭಾರತದ ಸಮಾಜವು ಆಧುನೀಕರಣ ಪ್ರಕ್ರಿಯೆಗೆ ಒಳಗಾಗಿರುವುದರಿಂದ ಬೇಡ ಮತ್ತು ಮೇದ ಸಮುದಾಯಗಳಲ್ಲಿ ಆಧುನೀಕರಣ ಪರಿಮಳ ಸೇರ್ಪಡೆಯಾಗಿದೆ.

ಬೇಡ ಮತ್ತು ಮೇದ ಸಮುದಾಯಗಳನ್ನು ಇತರೆ ಮೇಲ್ಜಾತಿಯವರು ಕೆಳಜಾತಿಯವರು ಎಂದು ಅಸ್ಪೃಶ್ಯ ಸಮುದಾಯಗಳೆಂದು, ಅಪರಾಧಿ ಸಮುದಾಯಗಳೆಂದು ನೋಡುವುದು ಮತ್ತು ಈ ಸಮುದಾಯಗಳನ್ನು ಹೀನಾಯವಾಗಿ ನೋಡುವುದು ಇಂದು ಕಡಿಮೆಯಾಗಿದೆ.

ವ್ಯಕ್ತಿ ಅಧ್ಯಯನ ಕೈಗೊಂಡಾಗ ಸಂದರ್ಶಿಸಿದ ವ್ಯಕ್ತಿಗಳನ್ನು ಮೊದಲಿಗಿಂತ ಈಗ ನಿಮ್ಮ ಸಮುದಾಯದವರು ಒಗ್ಗಟ್ಟಾಗಿರಬೇಕು, ದೌರ್ಜನ್ಯಗಳನ್ನು ಎದುರಿಸಬೇಕು ಎನ್ನಿಸುತ್ತಿದೆಯೇ? ಎಂದು ಪ್ರಶ್ನಿಸಿದಾಗ, ಎರಡು ಸಮುದಾಯಗಳಲ್ಲಿ ಶೇ ೬೦ ಜನರು ಸಮುದಾಯದವರು ಒಗ್ಗಟ್ಟಾಗಿರಬೇಕು, ದೌರ್ಜನ್ಯಗಳನ್ನು ಎದುರಿಸಬೇಕು ಎನಿಸುತ್ತದೆ. ಆದರೆ ನಮ್ಮಲ್ಲಿ ಒಗ್ಗಟ್ಟಿಲ್ಲ. ಆದರೂ ಕೂಡ ಕೆಲವು ಸಮಸ್ಯೆಗಳ ಸಮುದಾಯಕ್ಕೆ ಎದುರಾದಾಗ ಎಲ್ಲರು ಒಗ್ಗಟಾಗುತ್ತೇವೆ ಎಂದು ಹೇಳಿದರು. ಇದರಿಂದ ಈ ಎರಡು ಸಮುದಾಯಗಳಲ್ಲಿ ಒಗ್ಗಟ್ಟಿಲ್ಲದಿದ್ದರೂ ಕೂಡ ಔಪಚಾರಿಕವಾಗಿ ಒಗ್ಗಟ್ಟನ್ನು ಪ್ರದರ್ಶಿಸುತ್ತವೆ ಮತ್ತು ದೌರ್ಜನ್ಯಗಳನ್ನು ಎದುರಿಸುತ್ತವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಬೇಡ ಸಮುದಾಯದಲ್ಲಿ ಮಹರ್ಷಿ ವಾಲ್ಮೀಕಿ ಸಂಘ, ಏಕಲವ್ಯ ಯುವಕ ಸಂಘ, ಮೇದ ಸಮುದಾಯದಲ್ಲಿ ಮೇದಾರ ಕೇತಯ್ಯ ಸಂಘ ಎಂಬ ಜಾತಿ ಸಂಘಟನೆಗಳಿರುವುದು ತಿಳಿಯುತ್ತದೆ. ಆದರೆ ಈ ಸಂಘಟನೆಗಳು ಇತರ ಜಾತಿಗಳ ಸಂಘಟನೆಗಳಿರುವಂತೆ ನಮ್ಮ ಜಾತಿಯಲ್ಲಿಯು ಸಂಘ ಮಾಡಬೇಕು ಎಂದು ಇವುಗಳನ್ನು ಹುಟ್ಟುಹಾಕಿದ್ದಾರೆ. ಆದರೆ ಈ ಸಮುದಾಯಗಳು ಬೇರೆ ಜಾತಿಯ ಸಂಘಟನೆಗಳು ಕಾರ್ಯಕ್ರಮಗಳನ್ನು ಮಾಡುತ್ತವೆ ಎನ್ನುವ ಸವಾಲಿಗೋಸ್ಕರ ಕೆಲವು ಕಾರ್ಯಕ್ರಮಗಳನ್ನು ಮಾಡುತ್ತವೆ. ಆದರೂ ಕೂಡ ಸಮುದಾಯಗಳಿಗೆ ಕೆಲವು ಸಮಸ್ಯೆಗಳು ಎದುರಾದಾಗ ಅವುಗಳನ್ನು ಎದುರಿಸಲು ಮತ್ತು ಜಾತಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಮಾಡಲು ಮತ್ತು ದೌರ್ಜನ್ಯಗಳನ್ನು ಎದುರಿಸಲು ಈ ಸಂಘಟನೆಗಳು ಅವಶ್ಯಕವಾಗಿವೆ. ಸುರಪುರ ತಾಲೂಕಿನ ಕೊಡೇಕಲ್ ಹೋಬಳಿಯಲ್ಲಿಯ ವಾಲ್ಮೀಕಿ ಸಂಘಟನೆಯ ವತಿಯಿಂದ ಗಣೇಶ ಚತುರ್ತಿಯ ಅಂಗವಾಗಿ ಹಲವಾರು ಸ್ಪರ್ದೆಗಳಾದ ಟ್ರ್ಯಾಕ್ಟರ್ ರಿವರ್ಸ್ ಚಾಲನೆ ಮಾಡುವ ಸ್ಪರ್ದೆ, ಕಬ್ಬಡ್ಡಿ ಪಂದ್ಯ, ವಾಲಿಬಾಲ್ ಪಂದ್ಯ ಇತ್ಯಾದಿ ಸ್ಪರ್ದೆಗಳು ಏರ್ಪಡಿಸಿ, ಆ ಊರಿನ ಮತ್ತು ಸಮುದಾಯದ ಜನರಿಗೆ ಮನೋರಂಜನೆ ಒದಗಿಸುತ್ತದೆ. ಹಾಗೂ ಯುವಕರಲ್ಲಿ ಸ್ಪರ್ಧಾ ಮನೋಭಾವನೆಯನ್ನು, ಇತರ ಊರಿನ ಜನರನ್ನು ಸಂಪರ್ಕವನ್ನು ಬೆಳೆಸುತ್ತವೆ.

ಆದರೆ ಈ ಸಂಘಟನೆಗಳು ಸರ್ಕಾರಿ ಯೋಜನೆಗಳು, ಕಾರ್ಯಕ್ರಮಗಳು, ನೀತಿನಿಯಮಗಳ ಬಗ್ಗೆ ಅರಿವು ಮೂಡಿಸುವ ಶಿಕ್ಷಣದ ಅರಿವು ಮೂಡಿಸುವ, ಪರಿಸರದ ಮಹತ್ವವನ್ನು ಕುರಿತು ಅರಿವು ಮೂಡಿಸುವ, ಸಾಮಾಜಿಕ ಸಮಸ್ಯೆಗಳಾದ ವೃದ್ಧಾಪ್ಯ, ವರದಕ್ಷಿಣೆ, ವೇಶ್ಯಾವೃತ್ತಿ, ಭ್ರಷ್ಟಾಚಾರ ಇತ್ಯಾದಿಗಳು ಕುರಿತು ಅರಿವು ಮೂಡಿಸುವ ಕಾರ್ಯಕ್ರಮಗಳು ಹಾಕಿಕೊಂಡಿರುವುದು ಕಂಡುಬರುವುದಿಲ್ಲ. ಅಲ್ಲದೆ ಈ ಜಾತಿ ಸಂಘಟನೆಗಳು ಜಾತಿ ವೈಷಮ್ಯವನ್ನು ಬೆಳೆಸುತ್ತವೆ, ಜಾತಿಯಲ್ಲಿಯೇ ಬಿರುಕುಂಟು ಮಾಡುತ್ತವೆ ಎಂದು ಬೇಡ ಸಮುದಾಯದ ಅಂಬ್ರೇಶ ಎನ್ನುವ ಕಕ್ಕೇರಿಯ ವ್ಯಕ್ತಿ ಹೇಳಿದ್ದಾನೆ. ಆದಾಗ್ಯೂ ಇಂತಹ ಜಾತಿ ಸಂಘಟನೆಯು ಯಾವುದೇ ಉದ್ದೇಶ ಹೊಂದಿದ್ದರೂ ಕೂಡ ಸಮುದಾಯುವು ಅಲ್ಪಸ್ವಲ್ಪವಾದರೂ ಬಲಗೊಳುತ್ತವೆ ಎಂದು ಹೇಳಬಹುದು.

ಸಮುದಾಯಗಳಲ್ಲಿ ಐಕ್ಯತೆಯನ್ನು ಉಂಟುಮಾಡಲು, ಸಮುದಾಯ ಬಲಪಡಿಸಲು ಸಂಘಟನೆಗಳು ಹುಟ್ಟಿಕೊಂಡಿದಾಗ್ಯೂ ಸಮಾಜದ ಒಳಗೆ ಇರುವ ಮೂಢನಂಬಿಕೆಗಳು, ಸಮುದಾಯದಲ್ಲಿರುವ ಸಣ್ಣತನ ಹಾಗೂ ಆಂತರಿಕ ವಿಘಟನೆ ಸಮುದಾಯಗಳು ಹಿಂದುಳಿಯಲು ಕಾರಣವಾಗಿದೆ ಎಂಬುದು ಅಂಬ್ರೇಶ ಕಕ್ಕೇರಿಯ ಮಾತಿನಿಂದ ಸ್ಪಷ್ಟವಾಗುವುದು.

**ಬುಡಕಟ್ಟುಗಳು ಮತ್ತು ಕುಲಪಂಚಾಯ್ತಿ**

ಭಾರತದಲ್ಲಿಯ ಪ್ರತಿಯೊಂದು ಜಾತಿ ಮತ್ತು ಬುಡಕಟ್ಟು ಸಮುದಾಯಗಳು ಕುಲಪಂಚಾಯ್ತಿ ಅಥವಾ ಜಾತಿ ಪಂಚಾಯತಿ ಹೊಂದಿವೆ. ಈ ಕುಲಪಂಚಾಯತಿಯು ಸಮುದಾಯಗಳ ಒಳಾಡಳಿತವನ್ನು ಸಮುದಾಯದ ಸಮಸ್ಯೆಗಳನ್ನು, ಸಮುದಾಯದಲ್ಲಿಯ ನ್ಯಾಯ ತೀರ್ಮಾನ ಮಾಡುವ ಕಾರ್ಯವನ್ನು ಮಾಡುತ್ತಿದ್ದವು. ಸಾಮಾನ್ಯವಾಗಿ ಇದು ಸಮುದಾಯದ ಹಿರಿಯರಾದ ಐದು ಜನರಿಂದ ಕೂಡಿರುತ್ತದೆ. ಇವರನ್ನು 'ಪಂಚರು' ಎಂದು ಕರೆಯುತ್ತಾರೆ. ಇವರು ನೀಡಿದ ನ್ಯಾಯದ ತೀರ್ಪು ಅಂತಿಮವಾಗಿತ್ತು. ಈ ನ್ಯಾಯ ತೀರ್ಮಾನ ನಡೆಯುವ ಸ್ಥಳವನ್ನು ನ್ಯಾಯಕಟ್ಟೆ, ಕಟ್ಟೆಮನೆ, ದೈವದಕಟ್ಟೆ ಎಂದು ಕರೆಯುತ್ತಿದ್ದರು. ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯದಲ್ಲಿಯು ಕುಲಪಂಚಾಯತಿಗಳು ಇರುವುದನ್ನು, ಈ ಸಮುದಾಯಗಳು ವಾಸಿಸುವ ಓಣಿಯಲ್ಲಿರುವ ಕಟ್ಟೆಮನೆ, ನ್ಯಾಯದ ಕಟ್ಟೆ, ದೈವಕಟ್ಟೆಗಳಿರುವದರಿಂದ, ಈ ಸಮುದಾಯದಲ್ಲಿ ದೇಸಾಯಿ, ಕುಲಕರ್ಣಿ, ಗೌಡ, ಎಂಬ ಮನೆತನದ ಹೆಸರುಗಳಿಂದ ಸ್ಪಷ್ಟವಾಗುವುದು. 'ಪಂಚರು'ಗಳ ಉತ್ತರಾಧಿಕಾರವು ವಂಶಪಾರಂಪರ್ಯವಾಗಿತ್ತು ಪಂಚರನ್ನು ದೈವದವರು ಎಂದು ಕರೆಯುತ್ತಿದ್ದರು. ಪ್ರತಿಯೊಂದು ಆಚರಣೆಗಳು, ಸಂಪ್ರದಾಯಗಳು, ಉತ್ಸವಗಳು ಹೇಗೆ ನಡೆಯಬೇಕು ಎಂಬುದು ಸಮುದಾಯದ ಈ ಕುಲಪಂಚಾಯ್ತಿಗಳೇ

ನಿರ್ಧರಿಸುತ್ತಿದ್ದವು. ಸಮುದಾಯದ ಬಿಕ್ಕಟ್ಟುಗಳಿಗೆ, ಸಮುದಾಯದೊಳಗಿನ ಜಗಳಗಳನ್ನು ಇದು ಬಗೆಹರಿಸುತ್ತಿತ್ತು. ಇದರಿಂದ ಸಮುದಾಯದ ನಿಯಂತ್ರಣ ಮತ್ತು ನ್ಯಾಯ ನೀಡುವ ಕಾರ್ಯವನ್ನು ತನ್ನಲ್ಲಿ ಇಟ್ಟುಕೊಂಡಿರುತ್ತಿತ್ತು. ಆದರೆ ಇಂದು ಈ ಸಮುದಾಯಗಳ ಕುಲಪಂಚಾಯ್ತಿಯಲ್ಲಿ ಬದಲಾವಣೆಯಾಗಿದೆ. ಅಂದರೆ ಆಚರಣೆಗಳು, ಸಂಪ್ರದಾಯಗಳು, ಉತ್ಸವಗಳು ಹೇಗೆ ನಡೆಯಬೇಕು ಎಂಬುದು ಕುಲಪಂಚಾಯಿತಿಗಳು ನಿರ್ಧರಿಸುತ್ತಿಲ್ಲ. ಸಮುದಾಯದ ಜಗಳಗಳು, ಬಿಕ್ಕಟ್ಟುಗಳು, ಕುಲಪಂಚಾಯತಿಯಿಂದ ಪೋಲಿಸ್ ಸ್ಟೇಷನ್, ಕಾನೂನು, ಕೋರ್ಟ್‌ಗಳಿಗೆ ಹೋಗುತ್ತಿವೆ. ಸಾಮಾಜಿಕ ನಿಯಂತ್ರಣವನ್ನು ತರುವಲ್ಲಿ ಇದು ಇಂದು ಮಹತ್ವ ಪಾತ್ರವಹಿಸುತ್ತಿಲ್ಲ. ಆದರೆ ಕೆಲವು ಸಣ್ಣಪುಟ್ಟ ಜಗಳಗಳನ್ನು ಇಂದು ಬಗೆಹರಿಸುತ್ತಿದೆ. ಇದರ ಬಗ್ಗೆ ಸಮುದಾಯದ ಯುವಕರು ಹಿರಿಯರಿಗಿಂತ ಕಡಿಮೆ ಗೌರವವನ್ನು ಹೊಂದಿದ್ದಾರೆ. ಕೆಲವು ಯುವಕರು ಇದರ ಅರಿವೆ ಇಲ್ಲದಂತೆ ಇರುವುದು ಕಂಡುಬರುತ್ತದೆ.

ಸಮುದಾಯಗಳು ಅತ್ಯಂತ ಎಚ್ಚರಿಕೆಯಿಂದ ಗಮನಿಸುವ ಮತ್ತು ಕಟ್ಟುನಿಟ್ಟಿನ ಕ್ರಮಗಳ ಮೂಲಕ ಸಂಭವಿಸಲ್ಪಡುವುದೆಂದರೆ ಮದುವೆಯ ಆಚರಣೆ, ಮದುವೆ ಎಂಬುದು ಪಾರಂಪರಿಕ ಸಮುದಾಯಗಳಲ್ಲಿ ಕೇವಲ ಎರಡು ಕುಟುಂಬಗಳ ನಡುವೆ ನಡೆಯುವ ಆಚರಣೆಯಲ್ಲ. ಅದು ಸಾಮುದಾಯಿಕವಾದದ್ದು. ಆದರೆ ಮದುವೆಯ ಆಚರಣೆ, ನಿಯಮಗಳು, ನಿಷೇಧಗಳು ಮಾತ್ರ ಸಮುದಾಯದ ಪಾರಂಪರಿಕ ಕಟ್ಟು ಪಾಡುಗಳಿಂದಲೇ ನಿಯಂತ್ರಿಸಲ್ಪಡುತ್ತವೆ. ಅಂತಿಮವಾಗಿ ಮದುವೆಯು ಸಮುದಾಯದ ಪಾರಂಪರಿಕ ಸಾಮಾಜಿಕ ನಿಯಮಗಳ ಮೂಲಕ ನ್ಯಾಯಬದ್ಧಗೊಳ್ಳುತ್ತದೆ. ಬೇಡ ಮತ್ತು ಮೇದ ಸಮುದಾಯಗಳಲ್ಲಿ ಪಾರಂಪರಿಕ ನಿಯಮಗಳ ಮೂಲಕ ಮದುವೆಗಳು ನೆರವೇರುತ್ತವೆ. ಆದರೆ ಇಂದು ಈ ಸಮುದಾಯಗಳಲ್ಲಿ ಬಾಳ ಸಂಗಾತಿಯ ಆಯ್ಕೆಗೆ ಸಂಬಂಧಿಸಿದಂತೆ ವಧು ವರರಿಗೆ ಆಯ್ಕೆಯ ಸ್ವಾತಂತ್ರ್ಯ, ತೆರಕೊಡುವ ಪದ್ಧತಿಗೆ ಬದಲಾಗಿ ವರದಕ್ಷಿಣೆ ಕೊಡುವ ಪದ್ಧತಿ ಕಂಡುಬಂದಿದೆ. ಈ ಎರಡು ಸಮುದಾಯಗಳಲ್ಲಿ ಮೊದಲು ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಹೋಗಿ ಹೆಣ್ಣು ಕೇಳುವ ಪದ್ಧತಿ ಇತ್ತು. ಆದರೆ ಇಂದು ಇದರಲ್ಲಿ ಸಡಿಲಿಕೆಯಾಗಿರುವುದು ತಿಳಿಯುತ್ತದೆ. ಇಷ್ಟ ಅಲ್ಲದೆ ಮೊದಲು ಈ ಸಮುದಾಯಗಳಲ್ಲಿ ಬಾಲ್ಯವಿವಾಹಗಳಾಗುತ್ತಿವೆ. ಬಾಲ್ಯ ವಿವಾಹಗಳು ನಡೆದರೂ ಅವು ಹಳ್ಳಿ ಪ್ರದೇಶದಲ್ಲಿ ನಡೆಯುತ್ತವೆ. ಮೇದರಲ್ಲಿ ಬಾಲ್ಯವಿವಾಹ ನಡೆಯುವುದು ಅತ್ಯಂತ ವಿರಳವಾಗಿದೆ.

ಬೇಡ ಮತ್ತು ಮೇದ ಸಮುದಾಯದ ಚರಿತ್ರೆಯಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿರಲಿಲ್ಲ. ಇಂದು ಈ ಸಮುದಾಯಗಳಲ್ಲಿ ವಿಧವಾ ವಿವಾಹ ಮತ್ತು ಮರುವಿವಾಹಗಳು ನಡೆಯುತ್ತಿರುವುದು. ಸಮುದಾಯದ ಸದಸ್ಯರ ಸಂದರ್ಶಿಸಿದಾಗ ತಿಳಿದುಬರುತ್ತದೆ. ಸಾಮಾನ್ಯವಾಗಿ ವಿಧವಾ ವಿವಾಹಗಳು

ಏರ್ಪಾಟು ಮದುವೆಗಳಾಗಿರದೆ, ದಾಖಲಾತಿ ವಿವಾಹಗಳು ಆಗಿರುವುದಿಲ್ಲ. 'ಹುಡಿಕಿ' ಎಂಬ ಪದ್ಧತಿಯಿಂದ ಈ ವಿವಾಹಗಳು ನಡೆಯುತ್ತವೆ.

## ಬೇಡ ಮತ್ತು ಮೇದ ಬುಡಕಟ್ಟುಗಳ ಆರ್ಥಿಕ ಸ್ಥಿತ್ಯಂತರಗಳು

'ಧರ್ಮವನ್ನೊಳಗೊಂಡಂತೆ ಎಲ್ಲಾ ಸಾಂಸ್ಕೃತಿಕ ಅಂಶಗಳೂ ಕೂಡ ಆರ್ಥಿಕ ಶಕ್ತಿಗಳ ವಿಕಾಸದಿಂದಲೇ ನಿಧಾರಿತವಾಗಿರುತ್ತವೆ' ಎಂಬುದು ಮಾರ್ಕ್ಸ್‌ನ ನಿಲುವಾಗಿತ್ತು. ಅಂದರೆ ಆಯಾ ಸಮುದಾಯ ಆರ್ಥಿಕ ಚಟುವಟಿಕೆ ಅವುಗಳ ವರ್ತಮಾನದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಸ್ಥಿತಿಗತಿಗಳನ್ನು ಪ್ರಭಾವಿಸುತ್ತವೆ. ಭಾರತದ ಶ್ರೇಣೀಕೃತ ವ್ಯವಸ್ಥೆ ಪಾರಂಪರಿಕ ಕಸುಬುಗಳನ್ನು ಅಥವಾ ಆರ್ಥಿಕ ಚಟುವಟಿಕೆಗಳನ್ನು ಅವಲಂಬಿಸಿದೆ. ಆರ್ಥಿಕ ಉತ್ಪಾದನೆಯ ರೂಪವೆ ಸಾಮಾಜಿಕ ಪರಿವರ್ತನೆಯ ಮೂಲ; ಮತ್ತೇನು ಅಲ್ಲ ಎಂಬ ಮಾರ್ಕ್ಸ್ ಹೇಳಿಕೆಯಿಂದ ಸ್ಪಷ್ಟವಾಗುವುದು. ಕಾರಣ ದುಡಿಮೆಯಲ್ಲಿ ತೊಡಗಿರುವ ಜನರು ತಮ್ಮ ಉತ್ಪಾದನಾ ರೀತಿಯ ವೈಶಿಷ್ಟ್ಯತೆಗೆ ಅನುಸಾರವಾಗಿ ನಿರ್ದಿಷ್ಟ ರೀತಿಯ ಸಾಮಾಜಿಕ ಸಂಘಟನಾ ವ್ಯವಸ್ಥೆಯನ್ನು ನಿರ್ಮಿಸುತ್ತಾರೆ. ಆದಿಮ ಮಾನವನ ಹಂತದ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾನತೆ ಇದ್ದರೂ ಉಳಿದೆಲ್ಲಾ ಸಾಮಾಜಿಕ ವ್ಯವಸ್ಥೆಗಳಲ್ಲಿ ಅಸಮಾನತೆ ಇರುವುದು ಕಂಡುಬರುತ್ತದೆ. ಪ್ರಾರಂಭದ ಹಂತದಲ್ಲಿ ಎಲ್ಲಾ ಸಮಾಜಗಳಲ್ಲಿಯು ಕೂಡ ಸಮಾನತೆಯಿಂದ ಮತ್ತು ಐಕ್ಯತೆಯಿಂದ ಕೂಡಿದ ಸ್ಥಿತಿಯಲ್ಲಿರಬಹುದಾದರೂ ಕಾಲ ಬದಲಾದಂತೆ ಶ್ರಮ ವಿಭಜನೆಯ ಪರಿಣಾಮವಾಗಿ ಸ್ತರಗಳಿಂದ ಕೂಡಿದ ವ್ಯವಸ್ಥೆಯಾಗಿ ಪರಿವರ್ತನೆಯಾಗುತ್ತವೆ. ಇದರಿಂದ ಉತ್ಪಾದನಾ ಸಾಧನಗಳ ಮೇಲೆ ವಿವಿಧ ವರ್ಗಗಳು ವಿವಿಧ ಮಟ್ಟದಲ್ಲಿ ಹಿಡಿತವನ್ನು ಹೊಂದುತ್ತವೆ. ಮಿಗುತಾಯದ ಮೇಲೆ ಒಡೆತನವನ್ನು ಹೊಂದಿದ ವರ್ಗವು ಉತ್ಪಾದನಾ ಸಾಧನಗಳ ಮೇಲೂ ತನ್ನ ಏಕಸ್ವಾಮ್ಯವನ್ನು ನಿರ್ದಿಷ್ಟ ಸ್ತರಗಳಿಗೆ ನಿರ್ದಿಷ್ಟಗೊಳಿಸುತ್ತದೆ. ಈ ಕಾರಣಕ್ಕಾಗಿ 'ಆರ್ಥಿಕತೆಯು ಲೌಕಿಕ ಅಧಿಕಾರ ರಚನೆಯನ್ನು ಮತ್ತೆ ಅಧೀನ ಸ್ಥಿತಿಯನ್ನು ರೂಪಿಸುತ್ತಿರುತ್ತದೆ.'[೯] ಆದಿವಾಸಿಗಳನ್ನು ಮುಖ್ಯವಾಹಿನಿಯಲ್ಲಿಲ್ಲದೆ ಪ್ರತ್ಯೇಕಗೊಂಡ ಸಮುದಾಯಗಳೆಂದು ಪರಿಗಣಿಸಿದರೂ ಕೂಡ ಮುಖ್ಯವಾಹಿನಿ ಸಮಾಜದ ಬಹುತೇಕ ಎಲ್ಲ ಬಗೆಯ ಸಾಮಾಜಿಕ ಆರ್ಥಿಕ ವಿನ್ಯಾಸಗಳನ್ನು ತಮ್ಮೊಳಗೆ ಅಂತರ್ಗತಗೊಳಿಸಿಕೊಂಡಿದ್ದಾರೆ. ಸ್ವಾತಂತ್ರ್ಯನಂತರದ ಭಾರತದ ಸಂವಿಧಾನ ಮತ್ತು ಶಾಸನಗಳ ಕಾನೂನುಗಳಿಂದ ಸಾಮಾಜಿಕ ಚಲನೆಯ ವೇಗವು ಚುರುಕುಗೊಂಡಿತು. ಕೈಗಾರಿಕೀಕರಣ ಮತ್ತು ಆಧುನಿಕ ಶಿಕ್ಷಣದಿಂದ ಶ್ರೇಣಿಕೃತ ಜಾತಿವ್ಯವಸ್ಥೆ ಮತ್ತು ವೃತ್ತಿ ರಚನೆಗಳ ನಡುವಿನ ಹೊಂದಾಣಿಕೆಯನ್ನು ನಾಶಮಾಡಿ ಜಾತ್ಯಾತೀತ ಕಸುಬುಗಳ ಹುಟ್ಟಿಗೆ ಕಾರಣವಾಯಿತು. ಮುಂದೆ ಅದು ಹೊಸ ಬಗೆಯ ಜ್ಞಾನ ಮತ್ತು ಕೌಶಲ್ಯಗಳನ್ನು ಒದಗಿಸಿಕೊಡಲು ಸಹಾಯಕವಾಯಿತು.

ಕೈಗಾರಿಕೀಕರಣದ ಫಲವಾಗಿ ಕೆಳಸ್ತರದ ಜನರು ಸುಲಭವಾಗಿ ನಿರ್ವಹಿಸುವ ಉದ್ಯೋಗಾವಕಾಶಗಳನ್ನು ಪಡೆದರು ಇದು ಹೊಸ ಸ್ಥಾನಮಾನಗಳ ಸೃಷ್ಟಿಗೆ ಕಾರಣವಾಯಿತು.

ಯುರೋಪಿನ ಕೈಗಾರಿಕೀಕರಣದ ಮಾದರಿಗಳನ್ನು ಅನುಕರಿಸುವ ಮೂಲಕ ಸ್ವಾತಂತ್ರ್ಯ ನಂತರ ಭಾರತದ ಆರ್ಥಿಕ ಯೋಜನೆಗಳು ಅನೇಕ ಸಮುದಾಯಗಳ ಆರ್ಥಿಕ ವ್ಯವಸ್ಥೆಯನ್ನೆ ದುರ್ಬಲಗೊಳಿಸಿದವು. ದೇಸಿ ಉತ್ಪಾದನಾ ವಿಧಾನಕ್ಕೆ ಮಾರುಕಟ್ಟೆಯೇ ಇಲ್ಲದಂತೆ ಮಾಡಿದವು. ಬುಡಕಟ್ಟುಗಳು ಅನಿವಾರ್ಯವಾಗಿ ವೃತ್ತಿಯೇ ಅಲ್ಲದ ಯಾವುದೋ ವೃತ್ತಿಗಳನ್ನು ಮಾಡುತ್ತಿವೆ. ಅದು ಅಲ್ಲದೆ ನಮ್ಮ ಎಲ್ಲಾ ಯೋಜನೆಗಳೂ ಪಶ್ಚಿಮದ ಅಭಿವೃದ್ಧಿಯ ಮಾನದಂಡಗಳನ್ನು ಮಾದರಿಯಾಗಿ ಇಟ್ಟುಕೊಂಡು ಬಂದಂತವು. ಇವತ್ತಿಗೂ ಬುಡಕಟ್ಟುಗಳಿಗೆ ಸರಿಯಾದ ಆರ್ಥಿಕ ಪ್ರವೇಶವೇ ಇಲ್ಲ. ಆದ್ದರಿಂದ ಇವರನ್ನು ಕೂಲಿಯಾಳುಗಳಾಗಿ ಗುಲಾಮರಾಗಿ ಇವತ್ತಿಗೂ ಬಳಸಿಕೊಳ್ಳಲಾಗುತ್ತಿದೆ. ಈ ಸಮುದಾಯಗಳ ಬಡತನ, ಅನಾರೋಗ್ಯ, ಶಿಕ್ಷಣ ಮತ್ತು ಉದ್ಯೋಗದ ಬಗ್ಗೆ ಸ್ಪಷ್ಟವಾದ ತಿಳುವಳಿಕೆಯೇ ನಮ್ಮ ಯೋಜನೆಗಳಿಗೆ ಇಲ್ಲ. ಹೀಗಿದ್ದರೂ ಕೂಡ ಬುಡಕಟ್ಟುಗಳು ಅನೇಕ ಬಗೆಯ ಆರ್ಥಿಕ ಸ್ಥಿತ್ಯಂತರಗಳಿಗೆ ಒಳಗಾಗುತ್ತ ಬಂದಿವೆ. ೧೯೮೦ರ ದಶಕದ ನಂತರ ಬುಡಕಟ್ಟು ಸಮಾಜಕ್ಕೆಂದು ಹಲವಾರು ಯೋಜನೆಗಳು ತಂದರು ಅವು ಯಾವವು ಫಲಕಾರಿಯಾಗುತ್ತಿಲ್ಲ.

ಬೇಡ ಮತ್ತು ಮೇದ ಸಮುದಾಯಗಳು ತಮ್ಮದೆಯಾದ ಕುಲಕಸುಬುಗಳನ್ನು ಹೊಂದಿವೆ. ಆದಿಮ ಹಂತದಿಂದ ಆಧುನಿಕ ಹಂತದ ವರೆಗೂ ತಮ್ಮ ಕುಲಕಸುಬನ್ನು ಮುಂದುವರೆಸಿಕೊಂಡು ಬಂದರೂ, ಕಾಲದ ಲಯಕ್ಕೆ ಅನುಗುಣವಾಗಿ ಕುಲಕಸುಬಿನ ಜೊತೆಗೆ ಬೇರೆ ಬೇರೆ ವೃತ್ತಿಗಳನ್ನು ಮಾಡುತ್ತಿವೆ. ಜಾಗತೀಕರಣದ ಸಂದರ್ಭದಲ್ಲಿಯ ಖಾಸಗೀಕರಣ ಮತ್ತು ಉದಾರೀಕರಣಗಳಿಂದ ದೇಶದ ಆರ್ಥಿಕ ವ್ಯವಸ್ಥೆಯೇ ಬದಲಾಗಿರುವುದರಿಂದ ಇದರ ಪ್ರಭಾವವು ಬುಡಕಟ್ಟುಗಳು ಬದಲಾದ ಆರ್ಥಿಕ ವ್ಯವಸ್ಥೆಗೆ ಹೊಂದಾಣಿಕೆಯಾಗುವುದು ಆಗುತ್ತಿಲ್ಲ. ಮತ್ತೆ ತಮ್ಮ ಕುಲಕಸುಬನ್ನು ಮುಂದುವರೆಸಲು ಸಾಧ್ಯವಾಗುತ್ತಿಲ್ಲ. ಇದರಿಂದ ಈ ಸಮುದಾಯಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಅಷ್ಟೇ ಅಲ್ಲದೆ ಈ ಬದಲಾದ ಆರ್ಥಿಕ ವ್ಯವಸ್ಥೆಯು ಬುಡಕಟ್ಟುಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳ ಮೇಲೆ ಪ್ರಭಾವ ಬೀರುತ್ತಿರುವದರಿಂದ ಈ ಎರಡು ಸಮುದಾಯಗಳು ಅನಿವಾರ್ಯವಾಗಿ ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾಗಬೇಕಾಗಿದೆ.

## ಮೇದರ ಆರ್ಥಿಕ ಸ್ಥಿತ್ಯಂತರ

ಮೇದರ ಮೂಲ ಕಸುಬು ಬಿದಿರು ಮತ್ತು ಬೊಂಬುಗಳಿಂದ ಸಾಮಗ್ರಿ ಮತ್ತು ಉಪಕರಣಗಳನ್ನು ಸಿದ್ಧಪಡಿಸುವುದು. ಆದರೆ ಈ ಪರಂಪರಾಗತ ಕಸುಬಷ್ಟನ್ನೆ ಇವರು

ಉಳಿಸಿಕೊಂಡರೆ ಜೀವನ ಸಾಗಿಸಲು ಆಗುವುದಿಲ್ಲ ಎನ್ನುತ್ತಾರೆ. ಆದರೆ ಇವರು ಪ್ರಕೃತಿಯಲ್ಲಿಯೇ ಬದುಕಿರುವವರಾಗಿರುವದರಿಂದ ಕುಲಕಸುಬನ್ನು ಬಿಡಲು ಸಿದ್ಧರಿಲ್ಲ, ಉದ್ಯೋಗವು ಬದುಕು ಸಾಗಿಸಲು ಅವಶ್ಯಕವಾಗಿದೆ. ಆದರೆ ಮೂಲ ಕಸುಬು ಇಂದು ಲಾಭದಾಯಕವಲ್ಲವೆಂಬ ಕೊರಗೂ ಮೇದರಲ್ಲಿದೆ.

ಮೇದ ಸಮುದಾಯದ ವ್ಯಕ್ತಿ ಅಧ್ಯಯನ ಸಂದರ್ಭದಲ್ಲಿ ಮೇದ ಸಮುದಾಯದ ಸದಸ್ಯರನ್ನು, ನಿಮ್ಮ ಮನೆಯಲ್ಲಿನ ಸದಸ್ಯರು ಈಗ ಯಾವ ಯಾವ ದುಡಿಮೆಗಳಲ್ಲಿ ತೊಡಗಿದ್ದಾರೆ? ಎಂದು ಪ್ರಶ್ನಿಸಿದಾಗ. ಸಾಮಾನ್ಯವಾಗಿ ೧೫ ಜನರ ಉತ್ತರವನ್ನು ಸಾಮಾನ್ಯೀಕರಿಸಿದಾಗ ಈ ಕೆಳಗಿನ ಉದ್ಯೋಗಗಳ ಹೆಸರನ್ನು ಹೇಳಿರುವುರು.

೧. ಕುಲಕಸುಬಾದ ಬುಟ್ಟಿ ಹೆಣೆಯುವುದು ಮತ್ತು ಕೃಷಿ ಉಪಯೋಗಿ ಮತ್ತು ಗೃಹೋಪಯೋಗಿ ಉಪಕರಣಗಳ ತಯಾರಿಸುವಲ್ಲಿ ತೊಡಗಿರುವರು.

೨. ಹಣ್ಣಿನ ವ್ಯಾಪಾರ

೩. ತರಕಾರಿ ವ್ಯಾಪಾರ

೪. ಕಾರ್‌ಪೆಂಟರ್ ಕೆಲಸ



೫. ಗೌಂಡಿ ಕೆಲಸ ಮಾಡುತ್ತಾರೆ.

೬. ಗೌಂಡಿ ಕೈ ಕೆಳಗೆ ಕೆಲಸ ಮಾಡುತ್ತಾರೆ.

೭. ಕೂಲಿ

೮. ಕೃಷಿ ಕೂಲಿ

೯. ಗಿಡಗಂಟಿಗಳನ್ನು ಗುತ್ತಿಗೆ ಹಿಡಿಯುವುದು.

೧೦. ನೌಕರಿಮಾಡುತ್ತಾರೆ.

ಇತ್ಯಾದಿ ಕೆಲಸಗಳಲ್ಲಿ ನಿರತರಾಗಿರುವುದು ಸಂದರ್ಶನದ ಮೂಲಕ ತಿಳಿಯುತ್ತವೆ. ಅಧ್ಯಯನಕ್ಕಾಗಿ ಸುರಪುರ ತಾಲೂಕಿನ ೧೦೦ ಕುಟುಂಬಗಳ ಸಮೀಕ್ಷೆ ಮಾಡಿದಾಗ ಕುಲ ಕಸುಬನ್ನು ೪೮ ಜನ ಮಾಡುವರು. ಅಂದರೆ ದುಡಿಯುವ ಜನರಲ್ಲಿ ಶೇ.೧೨.೬% ರಷ್ಟು ಮಾತ್ರ ಕುಲಕಸುಬನ್ನು ಮಾಡುವರು.

ಸಂದರ್ಶನದಲ್ಲಿ ನಿಮ್ಮ ಕುಲಕಸುಬು ಯಾವುದು? ಎಂದು ಕೇಳಿದಕ್ಕೆ ಶೇ.೨೦% ಜನರು ಬೇರೆ ಬೇರೆ ಉದ್ಯೋಗಗಳಲ್ಲಿ ಹೆಸರು ಹೇಳಿರುವುದರಿಂದ, ಕೇಳಿದ ಪ್ರಶ್ನೆಯೇ

ಅರ್ಥವಾಗಲಿಲ್ಲವೊ ಎಂದು ಪ್ರಶ್ನೆಯನ್ನು ಸ್ಪಷ್ಟಪಡಿಸಿ ಕೇಳಿದರೂ ಕೂಡ ಅವರು ಬೇರೆ ಉತ್ತರವೇ ನೀಡಿದರು. ಇದರಿಂದ ಕುಲಕಸುಬಾದ ಬಿದಿರು ಬೊಂಬುಗಳನ್ನು ಮಾರುವುದು ಮತ್ತು ಬುಟ್ಟಿ ಹೆಣೆಯುವುದು ಇತ್ಯಾದಿ ಕುಲಕಸುಬುಗಳನ್ನು ಬಿಟ್ಟು ಬೇರೆ ಉದ್ಯೋಗಗಳಲ್ಲಿ ತೊಡಗಿರುವುದು ಸ್ಪಷ್ಟವಾಗುವುದು.

ಸುರಪುರದಲ್ಲಿ ಬಿದಿರು ಬೊಂಬಿನ ಮಾರಾಟದ ವ್ಯಾಪಾರ ಮಾಡುವ ಭೀಮಣ್ಣಗೌಡ ಎಂಬ ವ್ಯಕ್ತಿಯನ್ನು ಸಂದರ್ಶಿಸಿದಾಗ,

**ಪ್ರಶ್ನೆ:** ನೀವೆ ಬಿದಿರು ಕಾಡಿನಿಂದ ಕಡಿದು ತರುತ್ತಿರೋ ಅಥವಾ ಬೇರೆಯವರಿಂದ ಖರೀದಿ ತರುತ್ತಿರೋ?

**ಉತ್ತರ:** ಬೇರೆ ಬೇರೆ ಕಡೆಯಿಂದ ಖರೀದಿ ತಂದು ಮಾರುತ್ತೇವೆ.

**ಪ್ರಶ್ನೆ:** ಖರೀದಿಸಿದ ಮಾಲನ್ನು ಯಾವುದರ ಮೂಲಕ ತರುತ್ತೀರಿ?

**ಉತ್ತರ:** ಲಾರಿಯಲ್ಲಿ ಲೋಡ್ ಮಾಡಿಕೊಂಡು ತರುತ್ತೀವಿ.

**ಪ್ರಶ್ನೆ:** ಲೋಡಾದ ಲಾರಿಗಳನ್ನು ಪೋಲಿಸರು/ಅರಣ್ಯ ಇಲಾಖೆಯವರು ಹಿಡಿಯುವುದಿಲ್ಲವೆ.?

**ಉತ್ತರ:** ಇನ್ನೂವರಿಗಾದರೂ ಹಿಡಿದಿಲ್ಲ, ಹಿಡಿದರೂ ಅದು ಡೀಲರಗಳೇ ನೋಡಿಕೊಳ್ಳುತ್ತಾರೆ.

**ಪ್ರಶ್ನೆ:** ಈ ವ್ಯಾಪಾರವು ವರ್ಷ ಪೂರ್ತಿ ಇರುತ್ತದೆಯೇ?

**ಉತ್ತರ:** ೨-೩ ತಿಂಗಳು ಕಡಿಮೆ ಇರುತ್ತವೆ. ಉಳಿದ ದಿನಗಳಲ್ಲಿ ಸರಿಯಾಗಿ ನಡೆಯುತ್ತದೆ.

**ಪ್ರಶ್ನೆ:** ಈ ವ್ಯಾಪಾರದಿಂದ ನಿಮಗೆ ಲಾಭವಿದೆಯೇ ಎಂದು ಕೇಳಿದಕ್ಕೆ?

**ಉತ್ತರ:** ಲಾಭ ಅಂದರೆ ೭೦-೮೦ ಸಾವಿರ ಮಾಲ್ ತಂದರೆ ಒಂದು ೧೦ ಸಾವಿರ ಉಳಿಯುತ್ತದೆ ಎಂದು ಉತ್ತರಿಸಿದರು. ಇವರ ಕುಲಕಸುಬಿಗೆ ಬೇಕಾದ ಬಿದಿರುಗಳು ಸುರಪುರ ಮತ್ತು ಸುತ್ತಲಿನ ತಾಲೂಕುಗಳಲ್ಲಿಯು ಸಿಗುವುದಿಲ್ಲ. ಇವರು ದೂರದ ಹುಬ್ಬಳ್ಳಿ ಧಾರವಾಡಗಳಲ್ಲಿ ಸಿಗುವುದರಿಂದ ಅಲ್ಲಿಂದ ಬಿದಿರು ತರಬೇಕಾದರೆ ಖರ್ಚು ಅಧಿಕವಾಗುತ್ತದೆ. ಅಷ್ಟೇ ಅಲ್ಲದೆ ಅಲ್ಲಿಂದ ತಂದವರ ಹತ್ತಿರ ಖರೀದಿಸಲು ಹೋದರೆ ಅಧಿಕ ಬೆಲೆಗೆ ಕೊಡುತ್ತಾರೆ. ಇದರಿಂದ ತಮ್ಮ ಕುಲಕಸುಬು ಲಾಭದಾಯಕವಲ್ಲವೆಂಬುದು ಸ್ಪಷ್ಟವಾಗುತ್ತದೆ. ಈ ರೀತಿ ಬೇರೆ ಕಡೆಯಿಂದ ತರಬೇಕಾದರೆ ಹಣದ ಸಮಸ್ಯೆಯೊಂದಿಗೆ ಇತರ ಸಮಸ್ಯೆಗಳನ್ನು ಎದುರಿಸುತ್ತಿರುವುದು ಅದಕ್ಕಾಗಿ ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿಕೊಂಡಿರುವರು.

ಸಂದರ್ಶನದಲ್ಲಿ ಇಂದಿಗೂ ನಿಮ್ಮ ಕುಲಕಸುಬು ಪ್ರಸ್ತುತ ಎಂದು ಅನ್ನಿಸುತ್ತಿದೆಯೇ ಎಂದು ಕೇಳಿದಕ್ಕೆ ಶೇ ೪೦ ಜನರು ಪ್ರಸ್ತುತ ಎಂದು ಉತ್ತರಿಸಿದರೆ, ಶೇ ೩೩.೩% ಜನರು ಇಂದು ಕುಲಕಸುಬು ಪ್ರಸ್ತುತವಾಗಿಲ್ಲ ಎಂದು ಉತ್ತರಿಸಿದರು. ಇನ್ನೂಳಿದ ಶೇ.೨೬.೬% ಜನರು ಉತ್ತರ ನೀಡುವಲ್ಲಿ ತಟಸ್ಥವಾದರು. ಪ್ರಸ್ತುತ ಎಂದು ಹೆಳಿದ ಶೇ ೪೦% ಜನರನ್ನು ಏಕೆ ಪ್ರಸ್ತುತ ಎಂದು ಕೇಳಿದಕ್ಕೆ ಈ ಮುಂದಿನ ಉತ್ತರಗಳನ್ನು ನೀಡಿದರು.

೧. ಬೇರೆ ಬೇರೆ ಸಮುದಾಯಗಳ ದೇವರ ವ್ರತಗಳನ್ನು ಮಾಡುವಾಗ, ಮತ್ತು ಮದುವೆಶಾಸ್ತ್ರ ಮತ್ತು ಇನ್ನಿತರ ಕೆಲವು ಆಚರಣೆಗಳಲ್ಲಿ ಬಿದಿರಿನ ಬುಟ್ಟಿ, ಮರಗಳು ಬೇಕೆ ಬೇಕಾಗುತ್ತವೆ ಎಂದು ಇದಕ್ಕೆ ಸಂಬಂಧಿಸಿದ ಪುರಾಣ ಹೇಳಲು ಪ್ರಾರಂಭಿಸಿದರು. ಈ ಕಾರಣಕ್ಕಾಗಿ ಕುಲಕಸುಬು ಇಂದಿಗೂ ಪ್ರಸ್ತುತ ಎಂದು ಹೇಳಿದರು.

೨. ಈ ಕಸುಬು ನಮ್ಮ ಹಿರಿಯರು ಬಹಳ ದಿನಗಳಿಂದಲೂ ಮಾಡಿಕೊಂಡಿ ಬಂದಿದ್ದಾರೆ. ಅದಕ್ಕಾಗಿಯಾದರೂ ಇದು ನಮಗೆ ಪ್ರಸ್ತುತವಾಗಿದೆ ಎಂದು ಹೇಳಿದರು.

ಇಂದು ನಮ್ಮ ಕುಲಕಸುಬು ಪ್ರಸ್ತುತವಲ್ಲ ಎಂದು ಉತರಿಸಿದ ಶೇ.೩೩.೩% ಜನರನ್ನು ಏಕೆ ಪ್ರಸ್ತುತವಾಗಿಲ್ಲ ಎಂದು ಕೇಲಿದಕ್ಕೆ.

೧. ನಮ್ಮ ಕುಲಕಸುಬಿಗಿಂತ ಬೇರೆ ಬೇರೆ ಉದ್ಯೋಗಗಳು ಮಾಡುವುದರಿಂದ ಲಾಭವಿದೆ ನಮ್ಮ ಉದ್ಯೋಗ ಮಾಡುವುದರಿಂದ ಹೊಟ್ಟೆಗೆ ಬಟ್ಟೆಗೆ ಸರಿಯಾಗುತ್ತದೆ. ಎಂದು ಹೇಳಿದರು.

೨. ಬಿದಿರು ಸರಳವಾಗಿ ಸಿಗುತ್ತಿಲ್ಲ. ಏಕೆಂದರೆ ಅರಣ್ಯದಲ್ಲಿ ಬಿದಿರು ಕಡಿಯಲು ಅರಣ್ಯ ಇಲಾಖೆಯಿಂದ ಅನುಮತಿ ಪಡೆಯಬೇಕು. ಆದರೆ ಅರಣ್ಯ ಇಲಾಖೆಯವರು ಅನುಮತಿ ಕೊಡುತ್ತಿಲ್ಲ. ನಮಗೂ ಕೂಡ ಬೇರೆ ಪ್ರದೇಶದಿಂದ ಖರೀದಿ ತಂದು ಮಾರಾಟಮಾಡುವುದಾಗಲಿ ಮತ್ತು ಇತರ ವಸ್ತುಗಳನ್ನು ಮಾಡುವುದಾಗಲಿ ಖರ್ಚುದಾಯಕವಾಗಿರುತ್ತದೆ. ಅಷ್ಟೇ ಅಲ್ಲದೆ ಖರೀದಿಸಿದ ಮಾಲನ್ನು ಪೋಲಿಸರು ಮತ್ತು ಅರಣ್ಯ ಇಲಾಖೆಯವರು ಲಾರಿಗಳನ್ನು ಹಿಡಿದು ತನಿಖೆಮಾಡುವರು.

೩. ಇಂದು ಪ್ಲಾಸ್ಟಿಕ್ ಬುಟ್ಟಿಗಳು, ಪ್ಲಾಸ್ಟಿಕ್ ಸಾಮಾನುಗಳನ್ನು ಜನರು ಬಳಕೆ ಮಾಡುವುದರಿಂದ ನಮ್ಮ ಬುಟ್ಟಿ ಮತ್ತು ಸಾಮಾನುಗಳಿಗೆ ಬೆಲೆ ಕಡಿಮೆಯಾಗಿದೆ. ಆದರೆ ಕೆಲವು ಸಂದರ್ಭಗಳಲ್ಲಿ ಮಾತ್ರ ಬಳಸುತ್ತಾರೆ ಎಂದು ಹೇಳಿರುವರು.

೪. ಶಾಲೆ ಕಲಿತ ನಮ್ಮ ಯುವಕ ಯುವತಿಯರು ನಮ್ಮ ಕಸುಬನ್ನು ಬಿಟ್ಟು ಬೇರೆ ಬೇರೆ ಕೆಲಸ ಮಾಡಲು ಭಯಸುತ್ತಿರುವುದರಿಂದ ಇಂದಿಗೂ ಪ್ರಸ್ತುತವಾಗಬೇಕಿಲ್ಲ.

ಈ ಮೇಲಿನ ಉತ್ತರಗಳಿಂದ ಮೇದರ ಕುಲಕಸುಬು ಮೊದಲಿನಿಂದ ನಮ್ಮ ಹಿರಿಯರು ಮಾಡಿಕೊಂಡು ಬಂದ ಕಸುಬಾಗಿರುವುದರಿಂದ ಅದನ್ನು ಮುಂದುವರಿಸಬೇಕೆಂಬ ಸಾಂಪ್ರದಾಯಿಕ ಮೇದರ ಉದ್ದೇಶದಿಂದ ಹಾಗೂ ಮದುವೆಶಾಸ್ತ್ರ ಮತ್ತು ಇನ್ನಿತರ ಶಾಸ್ತ್ರಗಳಲ್ಲಿ, ಆಚರಣೆಗಳಲ್ಲಿ ಬಿದಿರಿನ ಬುಟ್ಟಿ, ಮರಗಳು ಬಲಿಸಬೇಕೆಂಬ ಸಂಪ್ರದಾಯದಿಂದ ಅಷ್ಟೇ ಅಲ್ಲದೆ ಸಾಂಪ್ರದಾಯಿಕ ಕೃಷಿಯ ಕೆಲವು ಸಲಕರಣೆಗಳಿಗೆ ಮೇದರ ಕಸುಬನ್ನೆ ಅವಲಂಬಿಸಬೇಕಾದುದ್ದರಿಂದ ಮಾತ್ರ ಮೇದರ ಕುಲಕಸುಬು ಉಳಿದುಕೊಂಡಿದೆ.

ಮೇದರ ಕುಲಕಸುಬಿಗೆ ಅಗತ್ಯವಿರುವ ಕಚ್ಚಾ ಬಿದಿರು ಸುರಪುರ ತಾಲೂಕಿನಲ್ಲಿ ಮತ್ತೇ ಇತರೆಡೆಯಲ್ಲಿ ಸುಲಭವಾಗಿ ಸಿಗುತ್ತಿಲ್ಲ ಹಾಗೂ ಪ್ಲಾಸ್ಟಿಕ್ ಪುಟ್ಟಿಗಳು, ಪ್ಲಾಸ್ಟಿಕ್ ಸಾಮಾನುಗಳು ಬಿದಿನ ಸಮಾನುಗಳಿಗೆ ಸ್ಪರ್ಧೆಯಾಗಿ ನಿಂತಿವೆ. ಆಧುನಿಕ ಜಾತ್ಯಾತೀತ ಉದ್ಯೋಗಗಳಿರುವ ಈ ಸಮುದಾಯದವರಿಗೆ ದುಡಿಯುವುದಕ್ಕೆ ಅವಕಾಶ ಮಾಡಿಕೊಟ್ಟಿರುವುದು ಮತ್ತು ಆಧುನಿಕ ಶಿಕ್ಷಣದ ಪರಿಣಾಮದಿಂದಾಗಿ ಮೇದರ ಕುಲಕಸುಬು ವಿನಾಶದ ಅಂಚಿನಲ್ಲಿದೆ ಎಂದು ಸ್ಪಷ್ಟವಾಗುತ್ತದೆ. ಕಾರಣ ಸುರಪುರ ತಾಲೂಕಿನ ಬಹುತೇಕ ಮೇದ ಜನರು ಅಂದರೆ ದುಡಿಯುವ ಜನರಲ್ಲಿ ಶೇ.೮೭.೪ರಷ್ಟು ಜನರು ತಮ್ಮ ಕುಲಕಸುಬನ್ನೇ ಬಿಟ್ಟು ಬೇರೆ ಉದ್ಯೋಗದಲ್ಲಿರುವುದು ಸಮೀಕ್ಷೆಯಿಂದ ತಿಳಿದು ಬರುತ್ತದೆ.

ಸುರಪುರ ತಾಲೂಕಿನ ಮೇದರ ಸಮುದಾಯದವರು ಹೆಚ್ಚಾಗಿ ಹಣ್ಣಿನ ವ್ಯಾಪಾರ ಮತ್ತು ತರಕಾರಿ ವ್ಯಾಪಾರ ಮಾಡುವುದು ಅಧಿಕವಾಗಿದೆ. ಈ ಕೆಳಗಿನ ಅಂಕಿಸಂಖ್ಯೆಗಳಿಂದ ತಿಳಿಯುತ್ತವೆ.

**ಮೇದರ ಹಣ್ಣಿನ ವ್ಯಾಪಾರ ಮಾಡುವವರ ಕೋಷ್ಟಕ**

| ನೆಲೆಗಳು | ಕುಟುಂಬ | ಹಣ್ಣಿನ ವ್ಯಾಪಾರಿಗಳು | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ಸುರಪುರ | ೭೨ | ೧೮ | ೧೪ | ೩೨ |
| ಹುಣಸಗಿ | ೧೦ | ೦೫ | ೦೬ | ೧೧ |
| ಕೆಂಭಾವಿ | ೧೧ | ೦೫ | ೦೮ | ೧೩ |
| ಕಕ್ಕೇರಾ | ೦೩ | ೦೧ | - | ೦೧ |
| ಕೊಡೇಕಲ್ | ೦೪ | ೦೧ | ೦೨ | ೦೩ |
| ಒಟ್ಟು | ೧೦೦ | ೩೦ | ೩೦ | ೬೦ |

ಈ ಮೇಲಿನ ಕೋಷ್ಟಕದಿಂದ ೧೦೦ ಮನೆಗಳ ಸಮೀಕ್ಷೆಯಿಂದ ೬೦ ಜನ ಹಣ್ಣಿನ ವ್ಯಾಪಾರ ಮಾಡುವವರೆ ಆಗಿದ್ದಾರೆ. ಸುರಪುರದಲ್ಲಿ ೩೨ ಜನರು ಹಣ್ಣಿನ ವ್ಯಾಪಾರವನ್ನು ಮಾಡುವರು ಅದರಲ್ಲಿ ೧೮ ಜನ ಗಂಡಸರು, ೧೪ ಜನ ಹೆಂಗಸರಿರುವುದು ಕಂಡುಬರುತ್ತದೆ. ಹುಣಸಗಿಯಲ್ಲಿ ೧೧ ಜನರಲ್ಲಿ ೫ ಜನ ಗಂಡಸರು, ೬ ಜನ ಹೆಣ್ಣು ಮಕ್ಕಳು, ಕೆಂಭಾವಿ ೧೩ ಜನರಲ್ಲಿ ೫ ಜನ ಗಂಡಸರು, ೮ಜನ ಹೆಣ್ಣು ಮಕ್ಕಳು, ಕೆಕ್ಕೇರಿಯಲ್ಲಿ ಕೇವಲ ೧ ಒಬ್ಬ ವ್ಯಕ್ತಿಯೇ ಇರುವನು. ಕೋಡೇಕಲ್‌ನಲ್ಲಿ ೩ ಜನರಲ್ಲಿ ೧ ಗಂಡಸ್ಸು ೩ ಜನ ಹೆಂಗಸರು ವ್ಯಾಪಾರದಲ್ಲಿ ತೊಡಗಿರವರು. ಇದರಿಂದ ಸುರಪುರವನ್ನು ಹೊರತು ಪಡಿಸಿದರೆ, ಉಳಿದ ಕಡೆ ಗಂಡಸರಿಗಿಂತ ಹೆಂಗಸರೇ ಈ ವ್ಯಾಪಾರ ಮಾಡುವವರಾಗಿದ್ದಾರೆ. ಸುರಪುರದಲ್ಲಿ ಹಣ್ಣಿನ ಗಿಡಗಳಾದ ಸೀತಾಫಲ, ಬಾರೆಹಣ್ಣು, ಮಾವಿನ ಹಣ್ಣುಗಳನ್ನು ಗುತ್ತಿಗೆ ಹಿಡಿಯುವರು. ಈ ಹಣ್ಣುಗಳನ್ನು ಡೀಲರಗಳಂತೆ ಮಾರಾಟ ಮಾಡುವುದಾಗಲಿ ಅಥವಾ ಮಾರುಕಟ್ಟೆಯಲ್ಲಿ ಮತ್ತು ರಸ್ತೆಯ ಬದಿಗಳಲ್ಲಿ ಬಂಡಿಯ ಮೇಲೆ ಇಟ್ಟು ಮಾರುತ್ತಾರೆ.

**ತರಕಾರಿ ವ್ಯಾಪಾರ ಮಾಡುವವರ ಕೋಷ್ಟಕ**

| ನೆಲೆಗಳು | ಕುಟುಂಬ | ತರಕಾರಿ ವ್ಯಾಪಾರ ಮಾಡುವವರ ಪ್ರಮಾಣ | | |
|---|---|---|---|---|
| | | ಗಂಡು | ಹೆಣ್ಣು | ಒಟ್ಟು |
| ಸುರಪುರ | ೬೨ | ೧೩ | ೧೮ | ೩೧ |
| ಹುಣಸಗಿ | ೧೦ | ೦೨ | ೦೪ | ೦೬ |
| ಕೆಂಭಾವಿ | ೧೧ | ೦೪ | ೦೬ | ೧೦ |
| ಕಕ್ಕೇರಾ | ೦೩ | - | ೦೧ | ೦೧ |
| ಕೋಡೇಕಲ್ | ೦೪ | - | ೦೨ | ೦೨ |
| ಒಟ್ಟು | ೧೦೦ | ೧೯ | ೩೧ | ೫೦ |

ಈ ಮೇಲಿನ ಕೋಷ್ಟಕದಿಂದ ಹೆಚ್ಚಾಗಿ ಸ್ತ್ರೀಯರೇ ತರಕಾರಿ ವ್ಯಾಪಾರ ಮಾಡುವರು ಎಂಬುದು ಸ್ಪಷ್ಟವಾಗುವುದು. ಅಷ್ಟೇ ಅಲ್ಲದೆ ಎಲ್ಲಾ ಊರುಗಳಲ್ಲಿ ತರಕಾರಿ ವ್ಯಾಪಾರ ಮಾಡುವವರಲ್ಲಿ ಹೆಣ್ಣು ಮಕ್ಕಳೆ ಹೆಚ್ಚಾಗಿರುವುದು ಕಂಡುಬರುತ್ತದೆ. ಪುರುಷರ ಪ್ರಮಾಣ ಕಡಿಮೆಯಾಗಿದೆ.

ಸುರಪುರ ತಾಲ್ಲೂಕಿನ ಮೇದ ಸಮುದಾಯದಲ್ಲಿ ಶೇ. ೧೫.೮೭ರಷ್ಟು ಜನರು ಹಣ್ಣಿನ ವ್ಯಾಪಾರದಲ್ಲಿ, ೧೩.೨೨ ರಷ್ಟು ಜನರು ತರಕಾರಿ ವ್ಯಾಪಾರದಲ್ಲಿ ತೊಡಗಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ೩೦% ಜನರು ಈ ವ್ಯಾಪಾರಗಳನ್ನು ಮಾಡುತ್ತಿದ್ದಾರೆ. ದಿನಗೂಲಿ, ಕೃಷಿಕೂಲಿ, ಮನೆಕಟ್ಟುವ ಕೆಲಸ, ಬಡಿಗತನ ಕೆಲಸಗಳನ್ನು ಮಾಡುವವರು ಕೇವಲ ಸುರಪುರದಲ್ಲಿ ಮಾತ್ರ ಕಾಣುತ್ತಾರೆ. ಕೆಂಭಾವಿಯಲ್ಲಿ ೨ ಜನ ದಿನಕೂಲಿಯಾಗಿ ಕೆಲಸ ಮಾಡಿದರೆ, ಕಕ್ಕೆರಾದಲ್ಲಿ ೨ ಜನ ಕೃಷಿಕೂಲಿಯಾಗಿ ಕೆಲಸ ಮಾಡುವುದು ಹಾಗೂ ಕುಲಕಸುಬು, ಹಣ್ಣಿನ ವ್ಯಾಪಾರ, ತರಕಾರಿ ವ್ಯಾಪಾರ ಮಾಡುವುದು ಬಿಟ್ಟರೆ ಬೇರೆ ಉದ್ಯೋಗಗಳು ಮಾಡುವುದು ಕಂಡುಬರುವುದಿಲ್ಲ. ಇದರಿಂದ ಸುರಪುರದಲ್ಲಿ ಮೇದರ ಜನಸಂಖ್ಯೆ ಜಾಸ್ತಿ ಇದ್ದದಲ್ಲದೆ ಪಟ್ಟಣ ಪ್ರದೇಶವಾಗಿರುವುದರಿಂದ ಎಲ್ಲಾ ಹುದ್ದೆಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

**ಇತರೆ ಕಸುಬುಗಳು**

ಜೀವನ ನಿರ್ವಹಣೆಗಾಗಿ ಮೇದರು ಇಂದು ಯಾವುದೇ ರೀತಿಯ ಕೆಲಸವನ್ನು ಮಾಡಲು ಸಿದ್ಧರಾಗಿದ್ದಾರೆ. ಸುರಪುರ ಪಟ್ಟಣದಲ್ಲಿ ವಾಸಿಸುವ ಮೇದರು ಮನೆಗಳಿಗೆ ಸುಣ್ಣ ಬಣ್ಣ ಹೊಡೆಯುವುದು, ಅಟೋರಿಕ್ಷೆಗಳನ್ನು ಹೊಡೆಯುವುದು, ಅಂಗಡಿಗಳಲ್ಲಿ ಹಮಾಲಿ ಮಾಡುವುದು, ಆಟೋಗಳ ಬಾಡಿಗೆ ಪಡೆದು ಓಡಿಸುವುದು, ಸ್ವಂತ ಆಟೋಗಳಿದ್ದು ಅವುಗಳನ್ನು ನಡೆಸುವುದು. ಶಿಕ್ಷಣ ಪಡೆದ ಕೆಲವರು ಸರ್ಕಾರಿ ನೌಕರಿಯಲ್ಲಿದ್ದಾರೆ. ಕಂಟ್ರಾಕ್ಟರ್ ಆಗಿ, ಮೇಸ್ತ್ರಿಗಳಾಗಿ, ಗಾರೆ ಕೆಲಸದವರಾಗಿ, ಗೃಹೋಪಯೋಗಿ ವಸ್ತುಗಳನ್ನು ಮಾರುವವರಾಗಿ ಕೆಲಸ ಮಾಡುತ್ತಿದ್ದಾರೆ.

ಮೇದರು ಶಿಕ್ಷಣಕ್ಕೆ ಒತ್ತು ಕೊಡುತ್ತಿದ್ದಾರೆ. ಇದರಿಂದ ಸರ್ಕಾರಿ ನೌಕರಿಗಳನ್ನು ಪಡೆಯುವ ತವಕದಲ್ಲಿದ್ದಾರೆ. ಮೇದರಲ್ಲಿ ಸಾಮಾನ್ಯವಾಗಿ ೧೦೦ ಕುಟುಂಬಗಳ ಸರ್ವೆಯಲ್ಲಿ ೩೧ ಪದವಿಯನ್ನು, ೪ ಜನ ಸ್ನಾತಕೋತ್ತರ ಪದವಿಯನ್ನು, ೨ ಜನ ಡಿಪ್ಲೋಮಾ ೪ ಜನ ಐ.ಟಿ.ಐ ಓದಿದವರು ಸುರಪುರ ಪಟ್ಟಣದಲ್ಲಿ ಕಂಡುಬರುತ್ತಾರೆ. ಕೆಂಭಾವಿಯಲ್ಲಿ ೬ ಪದವಿ ಪೂರ್ವ ಶಿಕ್ಷಣವನ್ನು, ೬ ಜನ ಪದವಿ ಪಡೆದವರು ಇದ್ದಾರೆ. ಉಳಿದ ಕಡೆ ಇವರ ಪದವಿ, ಪದವಿಪೂರ್ವ ಶಿಕ್ಷಣ ಹೊಂದಿದವರೇ ಕಂಡುಬರುವುದಿಲ್ಲ. ಡಿ.ಎಡ್. ಬಿ.ಎಡ್‌ನಂತಹ ತರಬೇತಿ ಶಿಕ್ಷಣ ಪಡೆದವರು ಈ ಸಮುದಾಯದಲ್ಲಿ ಕಂಡುಬರುತ್ತಾರೆ. ಶಿಕ್ಷಕರು, ಕ್ಷೇತ್ರ ಶಿಕ್ಷಾಣಾಧಿಕಾರಿ, ಪ್ರಾಂಶುಪಾಲರು, ಉಪನ್ಯಾಸಕರು, ಅಟೆಂಡರ್, ಪಿವನ್, ಕ್ಲರ್ಕಗಳು ಈ ಸಮುದಾಯದವರಾಗಿರುವುದು ಕ್ಷೇತ್ರಕಾರ್ಯದಿಂದ ತಿಳಿದು ಬರುತ್ತದೆ.

ಮೇದರ ಕೃಷಿ, ಕೃಷಿಕೂಲಿ ಮಾಡುವುದು ಹೆಚ್ಚಾಗಿ ಕಂಡುಬರುವುದಿಲ್ಲ. ೧೦೦ ಮನೆಗಳ ಸಮೀಕ್ಷೆಯಲ್ಲಿ ಕೇವಲ ೮ ಜನ ಮಾತ್ರ ಸಿಗುತ್ತಾರೆ. ಕೃಷಿಯು ಮಾಡುವುದಿಲ್ಲ. ಇವರಲ್ಲಿ ಕೇವಲ ನಾಲ್ಕು ಕುಟುಂಬಗಳ ಮಾತ್ರ ಭೂಹಿಡುವಳಿಯನ್ನು ಹೊಂದಿದೆ. ಒಂದು ಕುಟುಂಬ ಮಾತ್ರ ೧೦ ಎಕರೆ ಭೂಮಿಯನ್ನು ಹೊಂದಿದ್ದು ಉಳಿದ ಮೂರು ಕುಟುಂಬಗಳಲ್ಲಿ ೨-೪

ಎಕರೆ ಒಳಗೆ ಭೂ ಹಿಡುವಳಿ ಹೊಂದಿವೆ. ಈ ಕುಟುಂಬಗಳು ಸಹ ಹಿಡುವಳಿಗಳನ್ನು ಲೀಜ್ ಕೊಡುತ್ತಾರೆ ಆದರೆ ಸ್ವತಃ ಸಾಗುವಳಿ ಮಾಡುವುದಿಲ್ಲ.

ಸರ್ಕಾರವು ಪರಿಶಿಷ್ಟ ಪಂಗಡದ ಅಭಿವೃದ್ಧಿಗೆ ಹೊರಡಿಸಿದ ಯೋಜನೆಗಳು, ಮತ್ತು ಇತರ ಅಭಿವೃದ್ಧಿ ಯೋಜನೆಗಳು ಯಾವುವು ಎಂಬುದು ಶೇ ೬೦% ಜನರಿಗೆ ಗೊತ್ತಿಲ್ಲ. ಶೇ.೨೬.೬% ಜನರಿಗೆ ಗೊತ್ತಿದ್ದರೂ ಅವುಗಳ ಲಾಭವನ್ನು ಅವರು ಪಡೆದುಕೊಂಡಿಲ್ಲ ಎಂಬುದು ಸಮುದಾಯದ ಸದಸ್ಯರ ಸಂದರ್ಶನದಿಂದ ತಿಳಿದುಬರುತ್ತದೆ. ಸರ್ಕಾರದ ಯೋಜನೆಗಳು ನಿಮ್ಮನ್ನು ಅಭಿವೃದ್ಧಿ ಪಡೆಸುತ್ತವೆಯೋ ಎಂದು ನಿಮಗನಿಸುತ್ತದೆಯೋ? ಎಂದು ಕೇಳಿದಕ್ಕೆ, ಆ ಅಭಿವೃದ್ಧಿ ಯೋಜನೆಗಳ ಬಗ್ಗೆ ನಮ್ಮ ಸಮುದಾಯದ ಬಹಳಷ್ಟು ಜನರಿಗೆ ಗೊತ್ತಿಲ್ಲ. ಆದರೆ ಅವುಗಳ ಉಪಯೋಗ ಪಡೆದುಕೊಂಡರೆ ಖಂಡಿತ ಅಭಿವೃದ್ಧಿ ಸಾಧ್ಯ ಎಂದು ಹೇಳಿರುವರು. ಆದರೆ ಈ ಅಭಿವೃದ್ಧಿ ಯೋಜನೆಗಳು ಸರಳವಾಗಿ ಸಾಮಾನ್ಯರಿಗೆ ದೊರಕುವುದಿಲ್ಲ ಎಂಬುದು ಇವರಿಗೆ ತಿಳಿದಂತೆ ಕಾಣುವುದಿಲ್ಲ.

ಈ ಸಮುದಾಯದ ಹೆಣ್ಣು ಮಕ್ಕಳೂ ಸಹ ಗಂಡಸರಂತೆ ದುಡಿಮೆ ಮಾಡುವರು. ತರಕಾರಿ ವ್ಯಾಪಾರ, ಹಣ್ಣಿನ ವ್ಯಾಪಾರ, ದನಗೂಲಿ, ಕುಲಕಸುಬನ್ನು, ಸರ್ಕಾರಿ ಹಾಗೂ ಖಾಸಗಿ ನೌಕರಿಗಳನ್ನು ಮಾಡುವರು.

ಪ್ರಸ್ತುತ ಹೆಚ್ಚು ಹೆಚ್ಚು ದುಡಿಮೆಯ ಅವಕಾಶಗಳಿರುವುದರಿಂದ ದುಡಿಮೆಯಿಂದ ಹೆಚ್ಚು ಆದಾಯ ಗಳಿಸಲು ಸಾಧ್ಯವಾಗುವುದು ಇದರಿಂದ ಕುಟುಂಬ ಶಿಕ್ಷಣ ಮಟ್ಟವನ್ನು ಮತ್ತು ಸ್ವಾವಲಂಬನೆಯನ್ನು ಬೆಳೆಸುವುದು, ಶಿಕ್ಷಣದಿಂದ ಸರ್ಕಾರಿ ವಲಯದಲ್ಲಿ, ಅರೆಸರ್ಕಾರಿ ವಲಯದಲ್ಲಿ, ನೌಕರಿಯನ್ನು ಪಡೆಯುತ್ತಿದ್ದಾರೆ. ಇದರಿಂದ ಜೀವನ ಶೈಲಿಯಲ್ಲಿ ಬದಲಾಗುವುದು. ಅಲ್ಲದೆ ಆರ್ಥಿಕ ಪ್ರಗತಿಯಿಂದ ಉನ್ನತ ಶಿಕ್ಷಣವನ್ನು ಪಡೆಯಲು ಮತ್ತು ಉನ್ನತ ಹುದ್ದೆಗಳನ್ನು ಪಡೆಯಲು ಸಾಧ್ಯವಾಗುವುದು ಇದರಿಂದ ಸಮುದಾಯದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಯೇ ಬದಲಾಗುತ್ತದೆ. ಆದ್ದರಿಂದ ಹೊಸ ಹೊಸ ದುಡಿಮೆಯ ವಿಧಾನಗಳನ್ನು ಅವಲಂಬಿಸಿ ಸಮುದಾಯ ಬದಲಾಗುತ್ತದೆ ಎಂಬುದು ಸ್ಪಷ್ಟವಾಗುವುದು.

**ಬೇಡ ಬುಡಕಟ್ಟಿನ ಆರ್ಥಿಕ ಸ್ಥಿತ್ಯಂತರ**

ಬೇಡ ಸಮುದಾಯದ ಮೂಲ ಕುಲಕಸುಬು ಬೇಟೆಯಾಗಿದೆ. ಆದರೆ ಹಲವಾರು ಕಡೆಗಳಲ್ಲಿ ಕೃಷಿ ಮತ್ತು ಕೃಷಿ ಕೂಲಿಯೇ ಇವರ ಮೂಲ ಕಸುಬಾಗಿದೆ. ಬೇಡ ಸಮುದಾಯದ ಬೇಟೆ, ಪಶುಪಾಲನೆ, ಕೃಷಿ ಎಂಬ ಮೂರು ಮಿಶ್ರ ಉತ್ಪಾದನಾ ವ್ಯವಸ್ಥೆಯಿಂದ ಬದುಕು ಸಾಗಿಸಿದ್ದುದು ಕಂಡುಬರುತ್ತದೆ. ಇದು ಮೌಖಿಕ ಸಾಹಿತ್ಯ, ಆಚರಣೆ, ಮತ್ತು ಸಂಪ್ರದಾಯಗಳಲ್ಲಿ ಕಂಡುಬರುತ್ತದೆ. ಬೇಡರ ಬೇಟೆ ಆಚರಣೆಯು ಅವರ ಬೇಟೆ ಕಸುಬಿನ ಸಂಕೇತವಾಗಿದೆ.

ಸುರಪುರ ತಾಲೂಕಿನ ಬೇಡ ಸಮುದಾಯವು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಭವ್ಯ ಪರಂಪರೆಯನ್ನು ಹೊಂದಿದೆ. ಆದರೆ ಆಧುನಿಕ ಜೀವನದ ಸವಾಲುಗಳನ್ನು ಎದುರಿಸಿ ಬದುಕಲು ಬೇಕಾಗಿರುವ ಆರ್ಥಿಕ ಸ್ಥಿತಿಗತಿ ತುಂಬಾ ದುರ್ಬಲವಾಗಿದೆ. ಬೇಡರ ಜೀವನ ಕ್ರಮ ಮತ್ತು ಜೀವನಾಧಾರಕ್ಕೆ ಅವಲಂಭಿಸಿರುವ ವೃತ್ತಿಗಳನ್ನು, ಸಾಮಾಜಿಕ, ಶೈಕ್ಷಣಿಕ ರಾಜಕೀಯ ಏಳುಬೀಳುಗಳನ್ನು ಅವಲೋಕಿಸಿದಾಗ ಬೇಡರ ಆರ್ಥಿಕ ಸ್ಥಿತಿಗತಿಯು ಅರ್ಥವಾಗುವುದು. ಸುರಪುರ ತಾಲೂಕಿನ ಬೇಡ ಸಮುದಾಯವು ಇರುವ ಸ್ಥಿತಿಯನ್ನು ಬಿಟ್ಟುಕೊಡಲಾರದೆ ಈಗ ಬರುತ್ತಿರುವು ಹೊಸ ಹೊಸ ಆರ್ಥಿಕ ರೂಪಗಳಿಗೂ ತಯಾರಾಗದೆ, ಕಷ್ಟದಲ್ಲಿ ಬದಲಾದ ಆರ್ಥಿಕತೆಗೆ ಹೊಂದಾಣಿಕೆಯಾಗಬೇಕೆಂಬ ತವಕವಿರಬೇಕಾದುದು ಈ ಸಮುದಾಯಕ್ಕೆ ಅತ್ಯಂತ ಅಗತ್ಯವಿದೆ.

ಸಾಮಾನ್ಯವಾಗಿ ಸುರಪುರ ತಾಲೂಕಿನ ಹಳ್ಳಿಯ ಬೇಡ ಸಮುದಾಯದವರು ಕೃಷಿ ಮತ್ತು ಕೃಷಿ ಕೂಲಿಯಲ್ಲಿ ತೊಡಗಿದ್ದಾರೆ. ಆದರೆ ಪಟ್ಟಣ ಮತ್ತು ಪಟ್ಟಣದ ಹತ್ತಿರವಿರುವ ಹಳ್ಳಿಗಳಲ್ಲಿಯ ಬೆಡರು ಅಧಿಕ ಜನ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವುದು ತಿಳಿಯುತ್ತದೆ.

ಬೇಡ ಸಮುದಾಯದ ಸಂದರ್ಶನ ಮತ್ತು ಸಮೀಕ್ಷೆಯಿಂದ ಈ ಮುಂದಿನ ಉದ್ಯೋಗಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

೧. ಕೃಷಿ

೨. ಕೃಷಿ ಕೂಲಿ

೩. ದಿನಗೂಲಿ

೪. ಗೌಂಡಿ

೫. ಗೌಂಡಿ ಕೈಕೆಳಗೆ ಕೆಲಸ ಮಾಡುವುದು

೬. ಹಣ್ಣಿನ ವ್ಯಾಪಾರ

೭. ತರಕಾರಿ ವ್ಯಾಪಾರ

೮. ಗಿಡಗಂಟಿಗಳನ್ನು ಗುತ್ತಿಗೆ ಹಿಡಿಯುವುದು.

೯. ಸರ್ಕಾರಿ ಉದ್ಯೋಗ

೧೦. ಖಾಸಗಿ ಉದ್ಯೋಗ

೧೧. ಜೀತದ ಕೆಲಸ

ಇತ್ಯಾದಿ ಕೆಲಸಗಳಲ್ಲಿ ತೊಡಗಿರುವರು. ಆದರೆ ಇವುಗಳ ಪ್ರಮಾಣದಲ್ಲಿ ವ್ಯತ್ಯಾಸವಿದೆ. ಶೇ.೧೪.೬೬ರಷ್ಟು ಜನರು ಕೃಷಿಯನ್ನು ಮಾಡಿದರೆ, ಶೇ.೩೨.೪೪ರಷ್ಟು ಜನರು ಕೃಷಿಕೂಲಿಯಲ್ಲಿ

ತೊಡಗಿರುವರು. ಒಟ್ಟಾರೆ ಕೃಷಿ ಚಟುವಟಿಕೆಯಲ್ಲಿ ೪೭.೧ ರಷ್ಟು ಜನರು ತೊಡಗಿರುವರು. ಆದರೆ ಸುರಪುರ ಪಟ್ಟಣವನ್ನು ಹೊರತು ಪಡಿಸಿ ಉಳಿದ ಕೆಂಭಾವಿ, ಕಕ್ಕೇರಿ ಹುಣಸಗಿ, ಕೊಡೇಕಲ್‌ಗಳಲ್ಲಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವವರ ಸಂಖ್ಯೆ ಅಧಿಕವಾಗಿದೆ. ಸುರಪುರ ಪಟ್ಟಣದಲ್ಲಿ ತರಕಾರಿ, ಹಣ್ಣಿನ ವ್ಯಾಪಾರ ಮಾಡುವವರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಈ ಭಾಗದ ಕೃಷಿ ಕಾರ್ಮಿಕರು ಸಾಮಾನ್ಯವಾಗಿ ಜಮೀನ್ದಾರ ಅಥವಾ ಮೇಲ್ಜಾತಿಯವರ ಹೊಲಗದ್ದೆ, ತೋಟಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲದೆ ಕಡಿಮೆ ಭೂ ಹಿಡುವಳಿ ಹೊಂದಿ ಕೃಷಿ ಮಾಡುವ ರೈತರು ಬೀಜ, ರಸಗೊಬ್ಬರ, ಕೀಟನಾಶಗಳಿಗೆ, ಕೃಷಿ ಉಪಕರಣಗಳನ್ನು ಖರೀದಿಸಲು ಮೇಲ್ಜಾತಿಯವರ ಅಥವಾ ಜಮೀನ್ದಾರರ ಹತ್ತಿರವೆ ಸಾಲ ಮಾಡುತ್ತಾರೆ. ಈ ಸಾಲದ ಮೇಲಿನ ಬಡ್ಡಿಯು ಅಧಿಕವಾಗಿರುವುದರಿಂದ ಇವರು ಬೆಳೆದ ಬೆಳೆಯ ಲಾಭದ ಅರ್ಧಪಾಲು ಸಾಲ ತೀರಿಸುವುದಕ್ಕೆ ಹೋಗುತ್ತದೆ. ಒಂದು ವೇಳೆ ಬೆಳೆಯು ಕೈಕೊಟ್ಟರೆ ಜೀತವೆ ಇವರಿಗೆ ಗತಿಯಾಗುತ್ತದೆ. ಇಂತಹ ಘಟನೆಗಳು ನಡೆದಿರುವ ಕುರಿತು ಕಕ್ಕೇರಾ, ಕೆಂಭಾವಿ ಈ ಸಮುದಾಯದ ಜನರನ್ನು ಸಂದರ್ಶಿಸಿದಾಗ ತಿಳಿದು ಬಂದಿತು. ಇವರಿಗೆ ಸರ್ಕಾರದಿಂದ ಸಬ್ಸಿಡಿ ಬೀಜ ಮತ್ತು ಕೃಷಿ ಉಪಕರಣಗಳು ಬರುತ್ತವೆ ಎಂಬುವುದೇ ಸಾಮಾನ್ಯ ರೈತರಲ್ಲಿ ಶೇ.೩೦% ಜನರಿಗೆ ಗೊತ್ತಿಲ್ಲ. ಶೆ.೨೬.೬ ಜನರಿಗೆ ಗೊತ್ತಿದ್ದರೂ ಮೇಲ್ಜಾತಿಯವರ ಅಥವಾ ಜಮೀನ್ದಾರರ ಹತ್ತಿರ ಸಾಲ ತಂದಿರುವುದರಿಂದ ಅವರ ಆಗ್ರೋ ಕೇಂದ್ರಗಳಲ್ಲಿ ಇವುಗಳ ಖರೀದಿ ಮಾಡಬೇಕಾದ ಮುಲಾಜಿಗೆ ಒಳಗಾಗುತ್ತಾರೆ. ಅಷ್ಟೇ ಅಲ್ಲದೆ ಸಾಮಾನ್ಯ ರೈತರ ಭೂಮಿಯ ಹೆಸರಲ್ಲಿ ಜಮೀನ್ದಾರರು ಅಥವಾ ಮೇಲ್ಜಾತಿಯ ರೈತರು ಸಬ್ಸಿಡಿ ಬೀಜ, ರಸಗೊಬ್ಬರ ಮತ್ತು ಕೃಷಿ ಉಪಕರಣಗಳು ತೆಗೆದುಕೊಳ್ಳುವರು ಎಂದು ಕೆಲವು ಕೊಡೇಕಲ್‌ನಲ್ಲಿಯ ರೈತರು ಸಾಮೂಹಿಕ ಚರ್ಚೆಯಲ್ಲಿ ಹೇಳಿರುವರು ೨-೩ ಮೂರು ಎಕರೆ ಹೊಲವಿದ್ದ ರೈತರು ಹೊಲವನ್ನು ಲೀಜ್‌ಗೆ ಕೊಟ್ಟು ಗೌಂಡಿ ಕೆಲಸವನ್ನು ಮತ್ತು ಇನ್ನಿತರ ಕೂಲಿ ಕೆಲಸ ಮಾಡುತ್ತೇವೆ ಎಂದು ಸಹ ಹೇಳಿರುವರು. ಆದರೆ ನಾರಾಯಣಪುರ ಆಣೆಕಟ್ಟಿನಿಂದ ಈ ಪ್ರದೇಶವು ನೀರಾವರಿ ಪ್ರದೇಶವಾದ್ದರಿಂದ ಹೆಚ್ಚು ಜನರು ಕೃಷಿ ಕೂಲಿಯಲ್ಲಿ ತೊಡಗಿದ್ದಾರೆ. ಸುರಪುರ ನಗರದಲ್ಲಿ ವಾಸಿಸುವ ಈ ಸಮುದಾಯದ ಜನರು ಎರಡು ಮೂರು ಎಕರೆ ಜಮೀನು ಹೊಂದಿದ್ದರು ಸಹ ಅದು ಕರ್ಲ ಭೂಮಿಯಾಗಿದ್ದು ಬೆಳೆ ಬೆಳೆಯಲು ಯೋಗ್ಯವಾದ ಭೂಮಿ ಆಗಿಲ್ಲ. ಅಲ್ಲದೆ ಈ ಪ್ರದೇಶದ ಜನರಿಗೆ ಹೆಚ್ಚು ದುಡಿಯುವ ಅವಕಾಶಗಳು ಇರುವುದರಿಂದ ಅವರು ಕೃಷಿಯನ್ನು ಬಿಟ್ಟು ಬೇರೆ ದುಡಿಯಮೆಯಲ್ಲಿ ತೊಡಗಿದ್ದಾರೆ. ಸುರಪುರ ನಗರದಲ್ಲಿಯ ಜನರು ದೊಡ್ಡ ದೊಡ್ಡ ಶ್ರೀಮಂತರ ಅಂಗಡಿಗಳಲ್ಲಿ ಹಮಾಲರಾಗಿ, ಅವರ ಸಾಲ ವಸೂಲಿ ಮಾಡುವ ಕೆಲಸ ಮಾಡುತ್ತಿದ್ದಾರೆ.

ನೀವು ಕೃಷಿ ಭೂಮಿಯನ್ನು ಹೇಗೆ ಪಡೆದುಕೊಂಡಿರಿ? ಎಂದು ಪ್ರಶ್ನಿಸಿದಾಗ, ನಮ್ಮ ತಾತ, ಮುತ್ತಾತರಿಂದಲೇ ಈ ಭೂಮಿ ಬಂದಿದೆ. ಅವರು ಕೂಡ ಕೃಷಿಯನ್ನು ಮಾಡುತ್ತಿದ್ದರು ಅದಕ್ಕಾಗಿ ನಾವು ಕೃಷಿಯನ್ನೆ ಮಾಡುತ್ತಿದ್ದವೆ ಎಂದು ಹೇಳಿದರು.

ಈ ಸಮುದಾಯದ ೧೦೦ ಕುಟುಂಬಗಳ ಸಮೀಕ್ಷೆಯಲ್ಲಿ ಶೇ.೨೭.೫೫ರಷ್ಟು ಜನರು ದಿನಗೂಲಿ ಕೆಲಸ ಮಾಡುವವರಿದ್ದಾರೆ. ಇವರು ಸಾಮಾನ್ಯವಾಗಿ ನಗರ ಮತ್ತು ಹಳ್ಳಿಗಳಲ್ಲಿಯು ಕಂಡುಬರುತ್ತಾರೆ. ಇವರು ಮನೆಗಳಿಗೆ ಸುಣ್ಣ ಮತ್ತು ಬಣ್ಣ ಹೊಡೆಯುವುದಕ್ಕೆ, ಸೈಕಲ್ ತಳ್ಳುಗಾಡಿಯಲ್ಲಿ ಸೀಮೆ ಎಣ್ಣೆಕೊಂಡು ಮಾರುವುದು, ಅಂಗಡಿಗಳಲ್ಲಿ ಕೆಲಸಮಾಡುವುದು, ಜಮೀನ್ದಾರರ, ಮೇಲ್ಜಾತಿಯವರ, ಶ್ರೀಮಂತರ ಟ್ರ್ಯಾಕ್ಟರ್, ಜೀಪ್‌ಗಳ ಚಾಲಕರಾಗಿ, ಮನೆಕಟ್ಟುವ ಕೂಲಿಗಳಾಗಿ, ಹೊಲಗದ್ದೆಗಳನ್ನು ಕಾಯುವ ಕಾವಲುಗಾರರಾಗಿ ಇತ್ಯಾದಿ ದಿನಗೂಲಿ ಕೆಲಸ ಮಾಡುತ್ತಿರುವವರು. ಇಂತಹ ದಿನಗೂಲಿ ಕೆಲಸಗಾರ ಗಂಡಸರಿಗೆ ೮೦-೧೦೦ ಹೆಂಗಸರಿಗೆ ೪೦-೫೦ ಕೂಲಿ ಇರುವುದು. ಸಾಮಾನ್ಯವಾಗಿ ಇಂತಹ ಕೆಲಸ ಮಾಡುವವರು ಭೂ ರಹಿತರು, ಅತ್ಯಂತ ಬಡವರು, ಅಧಿಕ ಸಾಲ ಹೊಂದಿದವರಾಗಿರುವುದು, ಪ್ರಾಥಮಿಕ ಶಿಕ್ಷಣ ಹೊಂದಿದವರು ಅಥವಾ ಅನಕ್ಷರಸ್ಥರು, ಮಾಡುವರು ಎಂಬುದು ಈ ಸಮುದಾಯದ ಕುಟುಂಬಗಳ ಸಮೀಕ್ಷೆಯಿಂದ ತಿಳಿಯುತ್ತದೆ.

ಈ ಸಮುದಾಯದ ಮಹಿಳೆಯರು ದುಡಿಮೆಯಲ್ಲಿ ತೊಡಗಿರುವರು. ಅವರು ಕೃಷಿಯಲ್ಲಿ ಗಂಡಸರ ಜೊತೆ ಹೊಲ ಗದ್ದೆಗಳಲ್ಲಿ ಕಳೆಕೀಳುವ ಭತ್ತ ತೊಗರಿ, ಸಜ್ಜೆಯನ್ನು ಕ್ಯೂಯಿಲು ಮಾಡುವ, ಮನೆಕಟ್ಟುವ ಕೆಲಸದಲ್ಲಿ, ಕೆಲವು ಸರ್ಕಾರಿ ನೌಕರಿಯಲ್ಲಿ, ಖಾಸಗಿ ಸಂಸ್ಥೆಗಳಲ್ಲಿ, ಹಣ್ಣಿನ ವ್ಯಾಪಾರ, ತರಕಾರಿ ವ್ಯಾಪಾರ ಮಾಡುವ ಕೆಲಸದಲ್ಲಿ ತೊಡಗಿರುವರು. ಕೃಷಿಯಲ್ಲಿ ಒಟ್ಟು ಶೇ.೧೪.೬೬ರ ಶೇ.೬.೮ರಷ್ಟು ಕೃಷಿಕೂಲಿಯಲ್ಲಿ ೩೧.೪೪ರಲ್ಲಿ ೧೫.೧ರಷ್ಟು, ದಿನಗೂಲಿ ಶೇ. ೨೭.೫೫ರಲ್ಲಿ ಶೇ.೧೫.೧ರಷ್ಟು, ದಿನಗೂಲಿ ಶೇ.೨೭.೫೫ರಲ್ಲಿ ಶೇ.೩.೩.ರಷ್ಟು, ಇತರೆ ಕೆಲಸದಲ್ಲಿ ಶೇ.೯.೭ರಲ್ಲಿ ೩.೧ರಷ್ಟು ಸ್ತ್ರೀಯರು ಭಾಗಿಯಾಗಿರುವುದು ೧೦೦ ಕುಟುಂಬಗಳ ಸಮೀಕ್ಷೆಯಿಂದ ತಿಳಿಯುತ್ತದೆ. ಈ ಕೆಲಸಗಳು ಮಹಿಳೆಯರಿಗೆ ದಿನನಿತ್ಯದ ಜೀವನ ನಿರ್ವಹಣೆಗೆ ಬೇಕಾದ ಕುಟುಂಬದ ಖರ್ಚಿಗೆ ಬೇಕಾದ ಕೆಲಸಗಳಾದವು. ಆದರೆ ಮುಂಜಾನೆಯಿಂದ ಮನೆಗೆಲಸದ ಕೆಲಸವನ್ನು ಕುಟುಂಬ ಪಾಲನೆ, ಪೋಷಣೆಯ ಕೆಲಸಗಳು ಕೂಡ ಇವಳ ಜವಾಬ್ದಾರಿಯಾಗಿದೆ. ಕಾರಣ ಮಹಿಳೆಯು ಪುರುಷನಿಗಿಂತ ಹೆಚ್ಚು ಪರಿಶ್ರಮ ಪಡುವಳು.

ಈ ಸಮುದಾಯದಲ್ಲಿ ಪಶುಸಂಗೋಪನೆ ಕಂಡುಬರುತ್ತದೆ. ಇವರು ಸಾಮಾನ್ಯವಾಗಿ ಆಡು ೧ ಅಥವಾ ೨ ಎರಡು ಕುರಿ, ಆಕಳು ಎಲ್ಲೋ ಒಬ್ಬರು ಇಬ್ಬರು ಎಮ್ಮೆಯನ್ನು ಸಾಕಿದ್ದು

ಕಂಡುಬರುವುದು. ಆದರೆ ಈ ಪಶುಸಂಗೋಪನೆಯೇ ಅವರ ಉತ್ಪಾದನೆಯ ಮೂಲವಾಗಿಲ್ಲ. ಇವುಗಳಿಂದ ಜನಕ್ಕೆ ೫-೨೦ರೂ ಹಾಲನ್ನು ಹೊಟೇಲ್‌ಗಳಿಗೆ ಮಾರುವರು. ಆದ್ದರಿಂದ ಇದರಿಂದಲೇ ಜೀವನ ನಿರ್ವಹಣೆ ಸಾಧ್ಯವಿಲ್ಲ. ಪಶುಸಂಗೋಪನೆಗೆ ಸರ್ಕಾರವು ಸಾಲವನ್ನು ಒದಗಿಸುವುದು ಅದರ ಬಗ್ಗೆ ಈ ಸಮುದಾಯದರಿಗೆ ಗೊತ್ತಿಲ್ಲ ಮತ್ತು ಅಂತಹ ಸಾಲವನ್ನು ಪಡೆಯದೆ ಇದ್ದದ್ದು ತಿಳಿದು ಬಂದಿದೆ.

ಸುರಪುರ ತಾಲೂಕಿನ ಬೇಡ ಸಮುದಾಯದಲ್ಲಿ ಪ್ರೌಢ, ಪದವಿ ಪೂರ್ವ, ಪದವಿ, ಸ್ನಾತಕೋತ್ತರ ಪದವಿ, ತಾಂತ್ರಿಕ, ತರಬೇತಿ ಶಿಕ್ಷಣವನ್ನು ಪಡೆದವರು ಇದ್ದಾರೆ. ಇಂತಹ ಶಿಕ್ಷಣ ಪಡೆದವರು ಬಹಳಷ್ಟು ಯುವಕರು ನಿರುದ್ಯೋಗಿಗಳಾಗಿರುವರು ಮತ್ತು ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಬೇರೆ ಸಮುದಾಯದರ ಜೊತೆ ಸ್ಪರ್ಧೆಮಾಡುವಲ್ಲಿ ವಿಫಲವಾಗಿರುವರು. ಆದರೆ ಮೀಸಲಾತಿಯಿಂದ ಕೆಲವರು ಮಾತ್ರ ಉದ್ಯೋಗವನ್ನು ಗಿಟ್ಟಿಸಿಕೊಂಡಿದ್ದಾರೆ.

ಕ್ಷೇತ್ರಕಾರ್ಯದಲ್ಲಿ ಈ ಸಮುದಾಯದ ಸದಸ್ಯರನ್ನು ಸಂದರ್ಶಿಸಿದಾಗ, ಸರ್ಕಾರ ನಿಮ್ಮನ್ನು ಅಭಿವೃದ್ಧಿ ಪಡಿಸಲು ಹಲವಾರು ಕಾರ್ಯಕ್ರಮಗಳು ಹಾಕಿಕೊಂಡಿದೆ ಅವುಗಳು ನಿಮಗೆ ಗೊತ್ತಿವೆಯೇ? ಎಂದು ಪ್ರಶ್ನಿಸಿದಾಗ, ಶೇ.೬೬.೬% ಜನರು ಅಭಿವೃದ್ಧಿ ಯೋಜನೆಗಳೇ ಗೊತ್ತಿಲ್ಲ ಎಂದು ಹೇಳಿದರೆ, ಶೇ.೨೦% ಜನರು ಗೊತ್ತಿದೆ ಎಂದು ಉತ್ತರಿಸಿದರು. ಉಳಿದ ೧೩.೩% ಜನರು ನಿರುತ್ತರಿಗಳಾದರು.

ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮದ ವತಿಯಿಂದ ಭೂ ಒಡೆತನ ಯೋಜನೆ, ಕೊಳವೆಬಾವಿ ಯೋಜನೆ, ಸ್ವಯಂ ಉದ್ಯೋಗ, ಸ್ವದ್ಯೋಗ ಯೋಜನೆ, ಗಂಗಾಕಲ್ಯಾಣ ಯೋಜನೆ, ಗ್ರಾಮೀಣ ಅಭಿವೃದ್ಧಿ, ಪಂಚಾಯತ್ ರಾಜ್ ಅಭಿವೃದ್ಧಿಗೆ ಸೇರಿದ ಯೋಜನೆಗಳು, ಮಹಿಳೆಯ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಯೊಜನೆಗಳು ಇತ್ಯಾದಿ ಯೋಜನೆಗಳು ಇರುವವು. ಇವುಗಳ ಬಗ್ಗೆ ಕೇವಲ ೨೦% ಜನರಿಗೆ ಮಾತ್ರ ಗೊತ್ತಿದೆ. ಆದರೂ ಇವುಗಳ ಸೌಲಭ್ಯ ಪಡೆಯಬೇಕಾದರೆ ರಾಜಕೀಯ ಹಿನ್ನೆಲೆಯನ್ನು ಹೊಂದಿರಬೇಕು. ಅಲ್ಲದೆ ಮಧ್ಯವರ್ತಿಗಳು ಸಾಮಾನ್ಯ ಜನರ ಹತ್ತಿರ ದುಡ್ಡು ತೆಗೆದುಕೊಂಡು, ಯೋಜನೆಯಲ್ಲಿ ಅರ್ಧಪಾಲು ತೆಗೆದುಕೊಳ್ಳುವರು ಎಂದು ಕ್ಷೇತ್ರ ಅಧ್ಯಯನದಿಂದ ತಿಳಿಯಿತು. ಕೇವಲ ರಾಜಕೀಯ ಪುಡಾರಿಗಳು ಮಾತ್ರ ಇವುಗಳ ಲಾಭವನ್ನು ಪಡೆಯುತ್ತಿದ್ದಾರೆ. ಈ ಪ್ರದೇಶದಲ್ಲಿ ಈ ಸಮುದಾಯದವರು ಅನಕ್ಷರಸ್ಥರಾಗಿರುವುದರಿಂದ ರಾಜಕೀಯ ಪುಡಾರಿಗಳಿಗೆ ಅನುಕೂಲವಾಗಿದೆ. ಯೋಜನೆಗಳ ಯೋಜನಾಧಿಕಾರಿಗಳು ಭ್ರಷ್ಟ ಅಧಿಕಾರಿಗಳಾಗಿರುವುದರಿಂದ ಸಾಮಾನ್ಯ ಜನರು ಇದರ ಫಲಾನುಭವ ಪಡೆಯಲು ಅಸಾಧ್ಯವಾಗಿದೆ. ಈ ಸಮುದಾಯದವರ ಪಾಲಿಗೆ ಈ ಯೋಜನೆಗಳು

ಯೋಜನೆಗಳಾಗಿ ಉಳಿದಿವೆ. ಮತ್ತು ಕೆಲವರ ಸ್ವತ್ತಾಗಿವೆ. ಆದ್ದರಿಂದ ಸಾಮಾನ್ಯ ಜನರಿಗೆ ನಿರುಪಯುಕ್ತವಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಮೇದರಲ್ಲಿ ಬೇಡರಲ್ಲಿ ಆರ್ಥಿಕ ಸ್ಥಿತ್ಯಂತರದ ವೇಗದಲ್ಲಿ ವ್ಯತ್ಯಾಸ ಕಂಡಬರುತ್ತದೆ. ಬೇಡರು ಸಾಂಪ್ರದಾಯಿಕ ಕೃಷಿ, ಕೃಷಿ ಕೂಲಿ, ಸಮುದಾಯಕ್ಕೆ ಸಂಬಂಧಿಸಿದ ಸಂಪ್ರದಾಯ, ಆಚರಣೆ, ನಂಬಿಕೆ, ನೆಲೆಗಳು, ಕಡಿಮೆ ಶೈಕ್ಷಣಿಕ ಮಟ್ಟ ಅಂದರೆ ಅನಕ್ಷರತೆ, ಬಡತನ ಇವುಗಳು ಇವರ ಆರ್ಥಿಕ ಸ್ಥಿತ್ಯಂತರ ಕಡಿಮೆ ವೇಗಕ್ಕೆ ಕಾರಣವಾಗಿವೆ.

ಈ ಎರಡು ಸಮುದಾಯಗಳು ಆಧುನಿಕ ಶಿಕ್ಷಣ, ಹೆಚ್ಚುತ್ತಿರುವ ಉದ್ಯೋಗಾವಕಾಶಗಳು, ನೀರಾವರಿ ಸೌಲಭ್ಯ ನಗರೀಕರಣ ಪ್ರಭಾವ, ಇತರ ಜಾತಿಯವರಂತೆ ತಾವು ಉನ್ನತ ಹುದ್ದೆಗಳನ್ನು ಸ್ಥಾನಗಳ ಪಡೆಯಬೇಕೆಂಬ ಭಾವನೆ, ಪಾಶ್ಚಾತ್ಯೀಕರಣ, ಸಂಸ್ಕೃತೀಕರಣ, ಮೀಸಲಾತಿ, ಸರ್ಕಾರದ ಹಲವಾರು ಯೋಜನೆಗಳು ಇತ್ಯಾದಿಗಳು, ಇವರ ಆರ್ಥಿಕ ಸ್ಥಿತ್ಯಂತರದ ಅಂಶಗಳಾಗಿವೆ. ಅಷ್ಟೆ ಅಲ್ಲದೆ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಪರೋಕ್ಷವಾಗಿ ಪ್ರಭಾವ ಬೀರಿವೆ. ವಿಶ್ವಸಂಸ್ಥೆ, ವರ್ಲ್ಡ್‌ಬ್ಯಾಂಕ್, ರಾಜಕೀಯ ಸಂಸ್ಥೆಗಳು ಇತ್ಯಾದಿ ಜಾಗತೀಕ ಸಂಸ್ಥೆಗಳು ತೃತೀಯ ಜಗತ್ತಿನ ದೇಶಗಳ ಅಭಿವೃದ್ಧಿಗೆ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ರೂಪಿಸುತ್ತವೆ. ಅಲ್ಲದೆ ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಬೇಕಾದಾಗೆಲ್ಲ ಸಾಲವನ್ನು ನೀಡುತ್ತವೆ. ಈ ಸಾಲವು ಯಾವ ಯಾವ ಕ್ಷೇತ್ರಗಳಿಗೆ ವಿನಿಯೋಗ ಮಾಡಬೇಕೆಂಬ ನಿರ್ದೇಶನವು ಕೂಡ ಅವುಗಳೇ ನೀಡುತ್ತದೆ. ಇದರಿಂದ ತೃತೀಯ ಜಗತ್ತಿನ ವಿಷಮ ಪರಿಸ್ಥಿತಿಯ ಅರಿವಿಲ್ಲದೆ ಜಾಗತೀಕ ಸಂಸ್ಥೆಗಳು ರೂಪಿಸಿದ ಈ ಯೋಜನೆಗಳು ಮತ್ತು ಇವುಗಳು ನೀಡುವ ಸಾಲ ಸೌಲಭ್ಯವು ಈ ದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳುವ ಉದ್ದೇಶವನ್ನು ಹೊಂದಿವೆ ಎಂಬುದು ಸ್ಪಷ್ಟವಾಗುವುದು. ಇಂತಹ ಜಾಗತೀಕ ಸಂಸ್ಥೆಗಳ ಯೋಜನೆಗಳು ಸಾಲ ಸೌಲಭ್ಯಗಳು ಸಮಾಜದ ಕೆಳಜಾತಿ, ವರ್ಗಗಳು ಮತ್ತು ಬುಡಕಟ್ಟುಗಳ ಮೇಲೆ ಪರೋಕ್ಷವಾಗಿ ಮತ್ತು ನೇರವಾಗಿ ಪ್ರಭಾವ ಬೀರುತ್ತವೆ. ಇದರ ಪರಿಣಾಮವಾಗಿ ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳು ಕೂಡ ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾಗಿರುವುದು ಕಂಡುಬರುತ್ತದೆ.

## ಬೇಡ ಮತ್ತು ಮೇದ ಬುಡಕಟ್ಟುಗಳ ಧಾರ್ಮಿಕ ಸ್ಥಿತ್ಯಂತರ

ಧರ್ಮವು ಸಾಮ್ಯಾನ್ಯವಾಗಿ ಆಚರಣೆಗಳು, ಕ್ರಿಯೆವಿಧಿಗಳು, ನಂಬಿಕೆಗಳು, ಮೌಲ್ಯಗಳನ್ನು ಹೊಂದಿರುವುದು. ಇವುಗಳು ಮಾನವನ ವರ್ತನೆಯನ್ನು ನಿಯಂತ್ರಿಸುತ್ತವೆ. ಇಂತಹ ಮಾನವನ ನಿಯಂತ್ರಿತ ವರ್ತನೆಯಿಂದ ಸಾಮಾಜಿಕ ನಿಯಂತ್ರಣ ಸಾಧ್ಯವಾಗುವುದು. ಸಾಮಾಜಿಕ ನಿಯಂತ್ರಣವು ನಿಯಮಗಳಿಂದ ಕೂಡಿರುವುದು. ಇದರಿಂದ ಸುವ್ಯವಸ್ಥಿತ ಸಾಮಾಜಿಕ ವ್ಯವಸ್ಥೆ

ಇರಲು ಸಾಧ್ಯವಾಗುವುದು. ಇಂತಹ ಧರ್ಮವು ಇಂದು ನಿನ್ನೆ ಹುಟ್ಟಿಕೊಂಡ ಧರ್ಮವಾಗಿರದೆ ಆದಿಮ ಕಾಲಘಟದಿಂದಲೇ ಬಂದಿರುವುದು ಎಂಬುದಕ್ಕೆ ಆದಿಮ ಹಂತದಲ್ಲಿ ಬುಡಕಟ್ಟುಗಳ ಕೆಲವು ಕ್ರಿಯಾವಿಧಿಗಳು, ಆಚರಣೆಗಳಿಂದ ತಿಳಿಯುತ್ತದೆ. ಆದಿಮಾನವರು ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆ, ಕೃಷಿ ಹಂತಗಳಲ್ಲಿಯ ಕ್ರಮಾನುಗತ 'ಆಹಾರ ಸಂಪಾದನೆಗಾಗಿ ಮಾಡುವ ಶ್ರಮ ಮತ್ತು ವಿಧಿಯಾಚರಣೆಗಳ ಮೂಲಕ ಧರ್ಮವೊಂದನ್ನು ರೂಪಿಸಿಕೊಂಡಿದ್ದಾರೆ'. ಈ ಧರ್ಮವು ಶಿಷ್ಟಧರ್ಮಗಳಿಗೆ ವಿರುದ್ಧವಾಗಿರುವುದು.

ಧಾರ್ಮಿಕವಾಗಿ ಭಾರತ ದೇಶವು ವೈವಿಧ್ಯತೆಯ ದೇಶವಾಗಿದ್ದು ವಿವಿಧ ಧರ್ಮದ ಜನರು ಇಲ್ಲಿ ವಾಸಿಸುತ್ತಾರೆ. ಕಾರಣ ಇಲ್ಲಿ ಮಠ ಮಂದಿರ, ಮಸೀದಿ, ಚರ್ಚು, ಗೋಪುರಗಳು ಕಂಡುಬರುವಷ್ಟು ಬೇರೆ ದೇಶಗಳಲ್ಲಿ ಕಂಡುಬರುವುದಿಲ್ಲ. ಈ ದೇಶದ ಜನರು ತಮ್ಮದೇಯಾದ ಕುಲದೈವ, ಮನೆದೇವರನ್ನು ಹೊಂದಿದ್ದು, ಅನೇಕ ಧಾರ್ಮಿಕ ವಿಧಿವಿಧಾನಗಳನ್ನು ಅನುಸರಿಸುತ್ತಾರೆ. ಈ ದೇಶದ ಬುಡಕಟ್ಟು ಸಮುದಾಯಗಳು ತಮ್ಮದೆಯಾದ ಧಾರ್ಮಿಕ ವಿಧಿವಿಧಾನಗಳನ್ನು ಹೊಂದಿದ್ದರು ಕೂಡ ವೈದಿಕೀಕರಣದಿಂದ, ಪಶಾಹತುಶಾಹಿ ರಾಜಕೀಯ ಹಿನ್ನೆಲೆಯಿಂದ, ಇಸ್ಲಾಂಮರ ಆಕ್ರಮಣದಿಂದ, ಹೊಸ ಹೊಸ ಧರ್ಮಗಳ ಮತ್ತು ಪಂಥಗಳ ಉದಯದಿಂದ ಇತರ ಧರ್ಮಗಳಿಗೆ ಪ್ರಭಾವಿತರಾಗಿ ಮತಾಂತರಗೊಂಡರು. ಅಲ್ಲದೆ ಕೆಲವರು ತಮ್ಮ ವಿಧಿವಿಧಾನಗಳ ಜೊತೆಗೆ ಇತರ ಧರ್ಮಗಳ ಅನುಕರಣೆ ಮಾಡಲಾರಂಭಿಸಿದರು.

ಜಾಗತೀಕರಣದ ಸಂದರ್ಭದಲ್ಲಿ ಸಂಸ್ಕೃತೀಕರಣ, ಪಾಶ್ಚಾತೀಕರಣ, ಆಧುನೀಕರಣ ಪ್ರಭಾವದಿಂದ ಬುಡಕಟ್ಟು ಧರ್ಮ ಅವನತಿಯ ಹಾದಿಯಲ್ಲಿರುವುದು. ಸುರುಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳು ಜಾತಿಗಳಾಗಿ ಪರಿವರ್ತನೆಯಾಗಿ ತಮ್ಮ ಸಮುದಾಯದ ಆಚರಣೆಗಳು, ಕ್ರಿಯಾವಿಧಿಗಳ, ರೂಪಾಂತರವಾಗುವುದು ಈ ಕೆಳಗೆ ಚರ್ಚಿಸಲಾಗಿದೆ. (ಇಲ್ಲಿ ಬುಡಕಟ್ಟು ಧರ್ಮ ಎಂಬ ಪದವನ್ನು ಬುಡಕಟ್ಟುಗಳ ಆಧ್ಯಾತ್ಮ ಅಥವಾ ಅನುಭಾವಕ್ಕೆ ಪರ್ಯಾಯವಾಗಿ ಬಳಸಲಾಗಿದೆ.)

ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯಗಳು ಮೂಲದಲ್ಲಿ ಮಾತೃದೇವತಾ ಆರಾಧಕರು ಮತ್ತು ಶಿವನ ಆರಾಧಕರಾಗಿದ್ದರು ಎಂಬುದು ಕುಲದೈವಗಳ ಹೆಸರುಗಳನ್ನು ಕೇಳಿದಾಗ ತಿಳಿದು ಬರುತ್ತದೆ. ಸಾಮಾನ್ಯವಾಗಿ ಈ ದೈವಗಳಿಗೆ ಗುಡಿಗಳು ಇಲ್ಲ. ಇವು ಸಾಮಾನ್ಯವಾಗಿ ಮರದ ಪೊಟರೆಯಲ್ಲಿ, ಕಲ್ಲು ಗುಂಪುಗಳಲ್ಲಿ, ಸಣ್ಣ ಕಟ್ಟೆಗಳಲ್ಲಿರುವುದು ತಿಳಿಯುತ್ತದೆ. ಆದರೆ ಕೆಲವು ಕಡೆಗಳಿಗೆ ಸಣ್ಣ ಗುಡಿಗಳನ್ನು ಕಲ್ಲಿನಿಂದ ಕಟ್ಟಿರುವುದು ಮತ್ತು

ಕಟ್ಟಿಸುತ್ತಿರುವುದು ಕ್ಷೇತ್ರಕಾರ್ಯ ಅಧ್ಯಯನದಿಂದ ತಿಳಿದು ಬಂದಿದೆ. ಕ್ಷೇತ್ರಕಾರ್ಯದ ಸಂದರ್ಶನದ ಸಮಯದಲ್ಲಿ, ನಿಮ್ಮ ದೇವರುಗಳಿಗೆ ಗುಡಿಗಳನ್ನು ನಿರ್ಮಿಸಲಾಗಿದೆಯೇ? ಎಂದು ಪ್ರಶ್ನೆಸಿದಾಗ, ಬೇಡ ಸಮುದಾಯದ ಶೇ ೬೦% ಜನರು ಗುಡಿಗಳು ಇಲ್ಲಾ, ಆದರೆ ಗುಡಿಯಾಕಾರ ಸಣ್ಣ ಕಟ್ಟೆಗಳನ್ನು ಕಟ್ಟಲಾಗಿದೆ ಹಾಗೂ ಗಿಡದ ಪೋಟರೆಯಲ್ಲಿ ನಮ್ಮ ದೇವರು ಇರುತ್ತದೆ ಎಂದು ಉತ್ತರಿಸಿದರು. ಇದೇ ಉತ್ತರವನ್ನು ಮೇದ ಸಮುದಾಯದ ಶೇ ೫೩.೩ ರಷ್ಟು ಜನರು ಹೇಳಿದರು. ಬೇಡ ಸಮುದಾಯದ ೨೦% ಜನರು ಈಗ ನಾವೆಲ್ಲರೂ ಸೇರಿ ರೊಕ್ಕಾ ಹಾಕಿ ಸಣ್ಣದು ಗುಡಿಕಟ್ಟಸಬೇಕಂತ ಮಾಡಿದ್ದೇವೆ ಎಂದು ಹೇಳಿದರೆ, ಮೇದ ಸಮುದಾಯದ ೨೬.೬% ಜನರು ಕಟ್ಟುಬೇಕು ಅಂತ ನಮ್ಮ ಮನಸ್ಸಿಗಿದೆ ಅದಕ್ಕಾಗಿ ಮುಂದೆ ಕಟ್ಟಿಸುತ್ತೇವೆ ಎಂದು ಹೇಳಿದರು. ಇದರಿಂದ ಬುಡಕಟ್ಟು ದೈವಗಳು ಸಾಮಾನ್ಯವಾಗಿ ಮೂರ್ತಿಯನ್ನು ಹೊಂದಿರವುದಿಲ್ಲ, ಗುಡಿಗಳನ್ನು ಹೊಂದಿರುವುದಿಲ್ಲ. ಕಾರಣ ಇವರು ಮೂಲದಲ್ಲಿ ಕಾಡಿನ ಗಿಡ,ಬಳ್ಳಿ ಮತ್ತು ಪ್ರಾಣಿಗಳ ಬಗ್ಗೆ ಗೌರವ ಭಾವನೆಯನ್ನು ಹೊಂದಿದ್ದು, ನಿಸರ್ಗದಲ್ಲಿನ ವಸ್ತುಗಳನ್ನು ಪೂಜಿಸುವರು ಎಂಬುದು ಸ್ಪಷ್ಟವಾಗುವುದು.

ಬೇಡ ಸಮುದಾಯದವರನ್ನು ನಿಮ್ಮ ಮನೆದೇವರು ಯಾವುದು? ಎಂದು ಕೇಳಿದಕ್ಕೆ, ಸಂದರ್ಶಕರು ವೆಂಕಟರಮಣ, ಮಲ್ಲಯ್ಯ, ಹುಲಿಗೆಮ್ಮ, ರೇಣುಕಾ, ಯಲ್ಲಮ್ಮ, ಮರಗಮ್ಮ, ಪರಮಾನಂದ, ಹಳೇರಾಯ ಎಂಬ ಇತ್ಯಾದಿ ಹೆಸರುಗಳನ್ನು ಹೇಳಿದರು. ಮೇದರನ್ನು ಕೇಳಿದರೆ, ವೆಂಕಟರಮಣ, ಮಲ್ಲಯ್ಯ, ಹಯ್ಯಾಳಪ್ಪ, ರೇಣುಕಾ ಎಲ್ಲಮ್ಮ, ಹಳೇರಾಯ ಎಂಬ ಇತ್ಯಾದಿ ಹೆಸರುಗಳು ಹೇಳಿರುವರು. ಈ ಎರಡು ಸಮುದಾಯದಲ್ಲಿ ಶೇ ೬೦% ಕುಟುಂಬಗಳು ವೆಂಕಟರಮಣ, ಮಲ್ಲಯ್ಯ, ರೇಣುಕಾಯಲ್ಲಮ್ಮ ಎಂಬ ದೇವರುಗಳೇ ಮನೆದೇವರಾಗಿರುವುದು ಸಮೀಕ್ಷೆಯಿಂದ ತಿಳಿಯುತ್ತದೆ.

ಕರ್ನಾಟಕದ ಇತಿಹಾಸದಲ್ಲಿ ಕ್ರಿ.ಶ. ೮ ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಹೊಸ ಧಾರ್ಮಿಕ ಪಂಥಗಳು ಹಾಗೂ ಹೊಸ ಧರ್ಮಗಳು ಹುಟ್ಟಿಕೊಳ್ಳಲು ಪ್ರಾರಂಭಿಸಿದವು. ಅಂದರೆ ಧಾರ್ಮಿಕ ಸಿದ್ಧಾಂತಗಳು ಹುಟ್ಟಿಕೊಂಡವು ಅವು ಬೌದ್ಧ, ಜೈನ, ಶೈವ, ವೈಷ್ಣವ ಹಾಗೂ ವೀರಶೈವ ಧಾರ್ಮಿಕ ಪಂಥಗಳು ಹುಟ್ಟಿಕೊಂಡುವು "ಮೇಲ್ನೋಟಕ್ಕೆ, ಈ ಸಿದ್ಧಾಂತಗಳು ಧರ್ಮಕ್ಕೆ ಸಂಬಂಧಿಸಿದಂತೆ ಕಂಡು ಬಂದರೂ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳು ಅವುಗಳಲ್ಲಿ ಸೇರಿಕೊಂಡಿದ್ದವು. ಆಗ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳು ಮೇಲೆ ಹಿಡಿತವನ್ನು ಸಾಧಿಸುವಷ್ಟು ಸಾಮರ್ಥ್ಯವನ್ನು ಧರ್ಮವು ಪಡೆದುಕೊಂಡಿತ್ತು."[೧೦] ಇಂತಹ

ಧಾರ್ಮಿಕ ಸಿದ್ಧಾಂತಗಳ ಪ್ರಭಾವಕ್ಕೆ ಬುಡಕಟ್ಟು ಸಮುದಾಯಗಳು ಒಳಗಾದವು. ಆದರಂತೆ ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯಗಳು ಕೂಡ ಈ ಧಾರ್ಮಿಕ ಸಿದ್ಧಾಂತಗಳ ಪ್ರಭಾವಕ್ಕೆ ಒಳಗಾದವು. ಮೊದಲು ನಿಸರ್ಗದಲ್ಲಿ ವಸ್ತುಗಳನ್ನು ಪೂಜಿಸುವವರಾಗಿದ್ದವರು ೮ನೇ ಶತಮಾನದಲ್ಲಿ ಹುಟ್ಟಿಕೊಂಡ ಶೈವ ಮತ್ತು ವೈಷ್ಣವ ಪಂಥಗಳಿಂದಾಗಿ ಈ ಸಮುದಾಯಗಳ ಪ್ರಭಾವಕ್ಕೆ ಒಳಗಾಗಿ ಅವುಗಳನ್ನು ಅನುಸರಿಸಲು ಪ್ರಾರಂಭಿಸಿದರು ಎಂಬುದಕ್ಕೆ ಅವರ ಮನೆದೇವರ ಹೆಸರುಗಳಾದ ವೆಂಕಟರಮಣ, ಮಲ್ಲಯ್ಯ ಹೆಸರುಗಳಿಂದ ತಿಳಿಯುತ್ತದೆ. ಅಲ್ಲದೆ ಈ ಕಾಲದ ಬೌದ್ಧ, ಜೈನ, ವೈಷ್ಣವ, ಶೈವ, ವೀರಶೈವ ಧರ್ಮಗಳು ರಾಜಪ್ರಭುತ್ವದ ಆಶ್ರಯ ಪಡೆದುದರಿಂದ ಆ ರಾಜಾಶ್ರಯಕ್ಕೆ ಒಳಗಾದ ಸಮುದಾಯಗಳೆಲ್ಲವು ಆ ಧರ್ಮವನ್ನೆ ಅನುಸರಿಸಬೇಕೆಂಬ ಒತ್ತಾಯದಿಂದಲೂ ಈ ಧರ್ಮಗಳು ಮತ್ತು ಪಂಥಗಳ ಪ್ರಭಾವಕ್ಕೆ ಒಳಗಾಗಬೇಕಾದ ಅನಿವಾರ್ಯತೆಯುಂಟಾಯಿತು.

ಕ್ಷೇತ್ರ ಅಧ್ಯಯನ ಸಂದರ್ಶನದ ಸಮಯದಲ್ಲಿ ಬೇಡ ಮತ್ತು ಮೇದ ಸಮುದಾಯಗಳ ಸದಸ್ಯರನ್ನು ನಿಮ್ಮ ಮನೆದೇವರನ್ನು ಬಿಟ್ಟು ಬೇರೆ ಯಾವ ದೇವರಗಳನ್ನು ಪೂಜಿಸುತ್ತಿದ್ದೀರಿ? ಎಂದು ಪ್ರಶ್ನಿಸಿದಾಗ, ವೇಣುಗೋಪಾಲಸ್ವಾಮಿ ಮಡ್ಡಿಮಲ್ಲಯ್ಯ, ಹಯ್ಯಾಳಪ್ಪ ತಿಂಥಣಿಮೌನೇಶ್ವರ, ಘತ್ತರಗಿಭಾಗಮ್ಮ, ಸಗರಯಲ್ಲಮ್ಮ ಎಂದು ಸುರಪುರ ನಗರದಲ್ಲಿ ವಾಸಿಸುವ ಬೇಡ ಮತ್ತು ಮೇದ ಸಮುದಾಯದವರು ಉತ್ತರಿಸಿದರೆ, ಕಕ್ಕೇರಾ, ಕೊಡೇಕಲ್‌ನಲ್ಲಿಯ ಜನರು ಪರಮಾನಂದ, ತಿಂಥಣಿ ಮೌನೇಶ್ವರ, ಸಗರ ಯಲ್ಲಮ್ಮ ಘತ್ತರಗಿ ಭಾಗಮ್ಮ ಎಂದರೆ, ಕೆಂಭಾವಿ, ಹುಣಸಗಿಯಲ್ಲಿ ಹಳೇರಾಯ, ತಿಂಥಣಿಮೌನೇಶ್ವರ, ಶರಣಬಸವೇಶ್ವರ, ಸಗರಯಲ್ಲಮ್ಮ, ಘತ್ತರಗಿಭಾಗಮ್ಮನನ್ನು ಪೂಜಿಸುತ್ತವೆ ಎಂದು ಹೇಳಿದ್ದಷ್ಟೆ ಅಲ್ಲದೆ ನಮ್ಮ ಊರಿನಲ್ಲಿರುವ ಮತ್ತು ನಮ್ಮ ಸುತ್ತಮುತ್ತಲಿನ ಎಲ್ಲ ದೇವರನ್ನು ಪೂಜಿಸುತ್ತೇವೆ ಎಂದು ಹೇಳಿದರು. ಇದರಿಂದ ತಮ್ಮ ಮನೆಯ ದೇವರ ಜೊತೆಗೆ ಆ ಪ್ರದೇಶದಲ್ಲಿ ಪ್ರಭಾವಿಯಾದ ದೇವರನ್ನು ಪೂಜಿಸುವುದರ ಜೊತೆಗೆ ತಮ್ಮ ಮೂಲ ದೇವರುಗಳಾದ ಹುಲಿಗೆಮ್ಮ, ಮರಗಮ್ಮ, ದ್ಯಾವಮ್ಮ, ಗಾಳಿಯಮ್ಮ, ಆಂಜನೇಯ ಮುಂತಾದ ದೇವರುಗಳು ಪೂಜಿಸುವುದು ತಿಳಿಯುತ್ತದೆ. ರಾಜಶಾಹಿಯಿಂದ ಉದ್ಭವವಾದ ವೇಣುಗೋಪಾಲ, ಪರಮಾನಂದ ಎಂಬ ಗುಡಿಗಳಲ್ಲಿನ ಅನೇಕ ದೇವರಗಳ ಪೂಜಿಸುವುದರ ಹಿಂದೆ ರಾಜಶಾಹಿಯ ಆಳ್ವಿಕೆಗೆ ಒಳಗಾದ ಸಂದರ್ಭದಲ್ಲಿಯ ಒತ್ತಡವೇ ಕಾರಣವಾಗಿದೆ.

ಬೇರೆ ಬೇರೆ ದೇವರಗಳನ್ನು ಏಕೆ ಪೂಜಾ ಮಾಡುತ್ತೀರಿ? ಎಂದು ಕೇಳಿದ್ದಕ್ಕೆ, ಈ ಸಮುದಾಯಗಳ ಜನರು ಸಾಮಾನ್ಯವಾಗಿ ಈ ಮುಂದಿನ ಕಾರಣಗಳನ್ನು ನೀಡಿದರು.

೧. ನಮ್ಮ ಹಿರಿಯರು ಈ ದೇವರುಗಳನ್ನು ಪೂಜಾ ಮಾಡುತ್ತಾ ಬಂದಿದ್ದಾರೆ.

೨. ನಮಗೆ ದೇವರು ಒಳ್ಳೆಯದು ಮಾಡಲಿ ಅಂತ

೩. ಆ ದೇವರುಗಳಿಗೆ ಪೂಜೆ ಮಾಡಿದರೆ ಮನೆಯವರಿಗೆ ಒಳ್ಳೆಯದಾಗುತ್ತಾದಂತ ಹೇಳ್ಯಾರ ಅದಕ್ಕೆ ನಾವು ಪೂಜಾ ಮಾಡುತ್ತೇವೆ.

೪. ಮನಸ್ಸಿಗೆ ನೆಮ್ಮದಿ ಸಿಗುವ ಕಾರಣಕ್ಕಾಗಿ ಪೂಜೆ ಮಾಡುತ್ತೇವೆ.

೫. ದೇವರ ಮೇಲೆ ಭಯಭಕ್ತಿ ಇರಬೇಕು, ಇದ್ದರೆ ಕೆಟ್ಟದಾಗುವುದಿಲ್ಲ ಎಂಬ ಕಾರಣಕ್ಕೆ.

ಈ ಮೇಲಿನ ಹೇಳಿಕೆಯ ಕಾರಣಗಳಿಗೆ ಹಿನ್ನೆಲೆಯಾಗಿ ಈ ಮುಂದಿನ ಕಾರಣಗಳಿಂದ ಸ್ಪಷ್ಟವಾಗುವುದು ೧)ನಮ್ಮ ಹಿರಿಯರು ಈ ದೇವರುಗಳನ್ನು ಪೂಜಾ ಮಾಡುತ್ತಾ ಬಂದಿದ್ದಾರೆ ಎಂಬುದರ ಹಿನ್ನೆಲೆ ರಾಜಶಾಹಿಯ ಒತ್ತಡ ಪ್ರಭಾವ ಇನ್ನೂ ಅಳಿಸಿಲ್ಲ ಎಂಬ ಕಾರಣ, ೨)ಇವರು ಹೊಂದಿರುವ ನಂಬಿಕೆ ೩) ಆ ದೇವರಗಳಿಗೆ ಪೂಜೆ ಮಾಡಿದರೆ ಮನೆಯವರಿಗೆ ಒಳ್ಳೆಯದಾಗುತ್ತಾದಂತ ಹೇಳ್ಯಾರ ಎನ್ನುವುದರಿಂದ ಇವರು ಸಂಸ್ಕೃತೀಕರಣದ ಪ್ರಭಾವಕ್ಕೆ ಒಳಗಾಗಿದ್ದಾರೆಂದು ತಿಳಿಯುತ್ತದೆ. ೪) ಮನಸ್ಸಿಗೆ ನೆಮ್ಮದಿ ಸಿಗುವ ಕಾರಣಕ್ಕಾಗಿ ಪೂಜೆಮಾಡುತ್ತೇನೆ. ಹಾಗೂ ೫) ದೇವರ ಮೇಲೆ ಭಯಭಕ್ತಿ ಇರಬೇಕು, ಇದ್ದರೆ ಕೆಟ್ಟದಾಗವುದಿಲ್ಲ ಎಂಬ ಕಾರಣಕ್ಕೆ ಪೂಜೆ ಮಾಡುತ್ತೇವೆ. ಈ ಎರಡು ಕಾರಣಗಳ ಹಿನ್ನೆಲೆ ಪುರೋಹಿತಶಾಹಿಯ ಭೋದನೆಯ ಪ್ರಭಾವಕ್ಕೆ ಈ ಸಮುದಾಯಗಳು ಒಳಗೊಂಡದ್ದರ ಪರಿಣಾಮವಾಗಿದೆ.

ಅಂದರೆ ಒಟ್ಟಾರೆಯಾಗಿ ರಾಜಶಾಹಿಯ ಒತ್ತಡ, ಸಂಸ್ಕೃತೀಕರಣ ಪ್ರಕ್ರಿಯೆ, ಈ ಸಮುದಾಯದವರು ಇತರರಿಂದ ಪಡೆದ ನಂಬಿಕೆ, ದೇವಾಲಯ, ಮಠಗಳನ್ನು ಬೆಳೆಸಲು ಮಾಡಿದ ಪುರೋಹಿತಶಾಹಿಯ ತಂತ್ರಗಳೇ ಇವರು ಮೂಲದೇವರನ್ನು ಬಿಟ್ಟು ಇಂದಿನ ಆಧುನಿಕ ದೇವರುಗಳನ್ನು ಪೂಜೆಮಾಡುತ್ತಿರುವುದಕ್ಕೆ ಕಾರಣಗಳಾಗಿವೆ.

ಪ್ರಸ್ತುತ ಸಂದರ್ಭದಲ್ಲಿ ಈ ಎರಡು ಸಮುದಾಯದವರು ತಿರುಪತಿ ವೆಂಕಟರಮಣ, ಶ್ರೀಶೈಲ ಮಲ್ಲಿಕಾರ್ಜುನ, ಧರ್ಮಸ್ಥಳದ ಮಂಜುನಾಥ, ಮಂತ್ರಾಲಯದ ರಾಘವೇಂದ್ರ ಇತ್ಯಾದಿ ಇಂತಹ ದೇವರುಗಳಿಗೆ ಹರಕೆ ಹೊರುವರು. ಈ ಹರಕೆಯನ್ನು ಮುಟ್ಟಿಸಲು ಕುಟುಂಬ ಸಮೇತವಾಗಿ ಅಥವಾ ದಂಪತಿಗಳು ಒಂದು ವರುಷಕ್ಕೊಮ್ಮೆ ಅಥವಾ ಮೂರು ವರ್ಷಕ್ಕೊಮ್ಮೆ ಯಾತ್ರೆಯನ್ನು ಕೈಗೊಳ್ಳವರು. ಅಲ್ಲದೆ ದೇವರ ದರ್ಶನ ಪಡೆದು ಹರಕೆಯನ್ನು ಕಾಣಿಕೆಯನ್ನು ನೀಡಿ ಸಂತೃಪ್ತರಾಗುವರು. ಪ್ರಸ್ತುತವಾಗಿ ಹಬ್ಬಿರುವ ಅಯ್ಯಪ್ಪಸ್ವಾಮಿ ಮಾಲೆ ಹಾಕುವುದು

ಅಂದರೆ ಒಂದು ತಿಂಗಳ ಕಾಲ ಸ್ವತಃ ಯುವಕರು ಅಡುಗೆ ಮಾಡಿಕೊಂಡು, ಸಾಯಂಕಾಲ ಮತ್ತು ಬೆಳಿಗ್ಗೆ ಸ್ನಾನ ಮಾಡಿ ಪೂಜೆ ಮಾಡುವುದು. ಈ ರೀತಿ ಒಂದು ತಿಂಗಳು ಪೂರೈಸಿದ ನಂತರ ಶಬರಿಯ ಅಯ್ಯಪ್ಪಸ್ವಾಮಿ ಗುಡಿಗೆ ಹೋಗಿ ದರ್ಶನ ತೆಗೆದುಕೊಂಡು ಬರುವರು. ಶ್ರಾವಣ ಮಾಸದ ಒಂದು ತಿಂಗಳು ಬಿಳಿಯ ಬಟ್ಟೆಯ ಹಾಕುವುದು ಇವುಗಳಲ್ಲಿ ಇಂದಿನ ಧಾರ್ಮಿಕ ಶಿಷ್ಟಾಚಾರಗಳಾಗಿವೆ. ಇಂತಹ ಆಚರಣೆಗಳನ್ನು ಈ ಪ್ರದೇಶದ ಎರಡು ಸಮುದಾಯಗಳು ಆಚರಿಸುತ್ತಿವೆ. ಆದರೆ ಇಂತಹ ಆಚರಣೆಗಳು ಈ ಸಮುದಾಯದಲ್ಲಿ ಕೇವಲ ಯುವಕರು ಮಾಡುತ್ತಾರೆ ಎಂಬುದು ಕ್ಷೇತ್ರಾಧ್ಯಯನದಿಂದ ತಿಳಿದು ಬಂದಿದೆ.

ಈ ಸಮುದಾಯದ ಸದಸ್ಯರನು, ಇಂತಹ ಆಚರಣೆಗಳನ್ನು ಏಕೆ ಆಚರಿಸುತ್ತೀರಿ? ಎಂದು ಪ್ರಶ್ನಿಸಿದರೆ, ಬೇರೆಯವರು ಇಂತಹ ಆಚರಣೆಗಳನ್ನು ಮಾಡುತ್ತಾರೆ ಅವರಿಗೆ ಒಳ್ಳೆಯದಾಗಿದೆ ಅದಕ್ಕಾಗಿ ನಾವು ಆಚರಿಸುತ್ತೇವೆ ಎಂದು ಉತ್ತರಿಸಿದರು.

ತಿರುಪತಿ, ಶ್ರೀಶೈಲ, ಧರ್ಮಸ್ಥಳ, ಮಂತ್ರಾಲಯ ಯಾತ್ರೆಯನ್ನು ಹಿಂದೂಗಳು ಆದರಲ್ಲೂ ಮೇಲ್ಜಾತಿಯವರು ಕೈಗೊಳ್ಳುವರು ಹಾಗೂ ಅಯ್ಯಪ್ಪಸ್ವಾಮಿ ಮಾಲೆಯನ್ನು ಮತ್ತು ಶ್ರಾವಣ ಮಾಸದ ವ್ರತವನ್ನು ಹಿಂದೂಗಳೇ ಆಚರಿಸುತ್ತಿದ್ದರು. ಅಲ್ಲದೆ ಕೌಟುಂಬಿಕವಾಗಿ ಆಚರಿಸುವ ಲಕ್ಷ್ಮಿವ್ರತ, ಗೌರಿವ್ರತ, ಸತ್ಯನಾರಾಯಣ ವ್ರತ ಇತ್ಯಾದಿಗಳು ಮೇಲ್ಜಾತಿಯವರು ಅಥವಾ ಹಿಂದೂಗಳು ಆಚರಿಸುವುದು ತಿಳಿಯುತ್ತದೆ. ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯದವರು ಇಂತಹ ಯಾತ್ರೆಗಳನ್ನು ಕೈಗೊಳ್ಳುವರು ಮತ್ತು ಮಾಲೆಯನ್ನು ಮತ್ತು ಬಟ್ಟೆಯನ್ನು ಹಾಕುವರು ಹಾಗೂ ವ್ರತಗಳನ್ನು ಆಚರಿಸುವರು. ಮೇಲ್ಜಾತಿಯವರು ಆಚರಿಸುವ ಕೆಲವು ವ್ರತಗಳನ್ನು ಈ ಸಮುದಾಯಗಳ ಆರ್ಥಿಕವಾಗಿ ಬಲಿಷ್ಠವಾದ ಕುಟುಂಬಗಳು, ನಗರಗಳಲ್ಲಿ ನೆಲೆಸಿರುವ ಕುಟುಂಬಗಳ, ಆಧುನೀಕರಣಗೊಂಡ ಕುಟುಂಬಗಳ ಈ ವ್ರತಗಳನ್ನು ಆಚರಿಸುತ್ತವೆ. ಅಲ್ಲದೆ ಗಣೇಶ ಚತುರ್ಥಿ ಇಂದು ಎಲ್ಲಾ ಸಮುದಾಯಗಳು ಆಚರಿಸುವಂತೆ, ಈ ಬುಡಕಟ್ಟು ಸಮುದಾಯಗಳು ತಾವು ವಾಸಿಸುವ ಓಣಿಯಲ್ಲಿ, ನಗರದಲ್ಲಿ ಗಣೇಶನನ್ನು ಕುಳ್ಳಿರಿಸಿ ೫ ದಿನಗಳ ಬೆಳಿಗ್ಗೆ ಮತ್ತು ಸಾಯಂಕಾಲ ಪೂಜೆ ಸಲ್ಲಿಸುವುದಲ್ಲದೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವರು. ಈ ಆಚರಣೆಗಳನ್ನು ಏಕೆ ಆಚರಿಸುತ್ತೀರಿ? ಎಂದು ಪ್ರಶ್ನಿಸಿದ್ದಕ್ಕೆ ಬೇರೆಯವರು ಆಚರಣೆ ಮಾಡುತ್ತಿದ್ದಾರೆ ಆದಕ್ಕಾಗಿ ನಾವು ಆಚರಣೆ ಮಾಡುತ್ತಿದ್ದೇವೆ ಎಂಬ ಉತ್ತರದಿಂದ ಸಂಸ್ಕೃತೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿದ್ದಾರೆಂಬುದು ಸ್ಪಷ್ಟವಾಗುವುದು.

ಈ ಮೇಲಿನ ಅಂಶಗಳಿಂದ ಬುಡಕಟ್ಟು ಸಮುದಾಯಗಳು ವೈಷ್ಣವೀಕರಣದ, ಶೈವೀಕರಣದ, ವೈದಿಕೀಕರಣದ ಪ್ರಕ್ರಿಯೆಗೆ ಒಳಗಾಗುತ್ತಿದ್ದಾರೆ ಅಥವಾ ಒಳಗಾಗಿದ್ದಾರೆ ಎಂಬುದು ಸ್ಪಷ್ಟವಾಗುವುದು.

ಭಾರತದಲ್ಲಿ ನೆಲೆಸಿರುವ ಮುಸ್ಲಿಂ, ಕ್ರಿಶ್ಚಿಯನ್‌ರು, ಜೈನರು ಆಚರಿಸುವ ಹಬ್ಬಗಳಾದ ಮೊಹರಂ, ರಂಜಾನ್, ಕ್ರಿಸ್‌ಮಸ್ ಡೇ, ಮಹಾವೀರ ಜಯಂತಿ ಆಚರಣೆಯಲ್ಲಿ, ಈ ಧರ್ಮದವರ ಸಖ್ಯವನ್ನು ಹೊಂದಿರುವ ಬುಡಕಟ್ಟು ಸಮುದಾಯಗಳು ಪಾಲ್ಗೊಳ್ಳುತ್ತವೆ. ಇದರಿಂದ ಆ ಧರ್ಮಗಳ ಆಚರಣೆ, ಆಚಾರ-ವಿಚಾರಗಳ ನಂಬಿಕೆಗಳು ತಿಳಿಯುವುದರಿಂದ ಅವುಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಳ್ಳುವರು ಅಥವಾ ಇವುಗಳು ಅವರಿಗೆ ಅರಿವಿಲ್ಲದಂತೆ ಅವರಲ್ಲಿ ಸೇರುವವು.

ಸುರಪುರ ತಾಲೂಕಿನ ಈ ಎರಡು ಸಮುದಾಯದವರು ಬೇರೆ ಧರ್ಮಗಳಾದ ಬೌದ್ಧ, ಜೈನ, ಕ್ರಿಶ್ಚಿಯನ್, ಮುಸ್ಲಿಂ ಧರ್ಮಗಳಿಗೆ ಮತಾಂತರಗೊಂಡದ್ದು ಕಂಡು ಬಂದಿಲ್ಲ. ವೈಷ್ಣವೀಕರಣ, ಶೈವಕರಣ, ವೈದಿಕೀಕರಣ ಪ್ರಕ್ರಿಯೆಗಳಿಗೆ ಒಳಗಾದರೂ ಕೂಡ ತಮ್ಮ ಮೂಲಧರ್ಮವನ್ನು ಬಿಟ್ಟಿಲ್ಲ. ಅದರ ಜೊತೆಯಲ್ಲಿ ಇವುಗಳ ಆಚರಣೆ ಮಾಡುತ್ತಿದ್ದಾರೆ. ಆದರೆ ಇವರ ಮೂಲಧರ್ಮದಲ್ಲಿ ರೂಪಾಂತರವಾಗಿರುವದು ಅಂದರೆ ಆಚರಣೆ, ಕ್ರಿಯಾವಿಧಿ, ಮೌಲ್ಯಗಳಲ್ಲಿ ಇತ್ಯಾದಿಗಳಲ್ಲಿ ರೂಪಾಂತರವಾಗಿದೆ.

ಈ ಧಾರ್ಮಿಕ ಪಂಥಗಳು ತಮ್ಮ ಬೋಧನೆ, ಆದರ್ಶಗಳಲ್ಲಿ ವೈವಿಧ್ಯತೆಯನ್ನು ಪಡೆದಿದ್ದರೂ ಭಾರತೀಯ ಸಂಸ್ಕೃತಿಯ ಸಂರಕ್ಷಣೆ, ಹಿಂದೂಧರ್ಮದ ಮತ್ತು ಸಮಾಜದ ಪುನರುಜ್ಜೀವನದಲ್ಲಿ ತಮ್ಮ ಏಕತೆಯನ್ನು ತೋರಿಸಿದೆ. ವಸಾಹತುಶಾಹಿ ಮತ್ತು ಬಂಡವಾಳಶಾಹಿಗಳಿಂದ ಜರ್ಝರಿತವಾಗಿ ಹಿಂದೂ ಸಮಾಜ ಚೇತರಿಸಲು ಈ ಪಂಥಗಳೇ ಕಾರಣವಾಗಿದೆಯೆಂದರೆ ಅತಿಶಯೊಕ್ತಿಯಲ್ಲ.

೯೦ರ ದಶಕದಲ್ಲಿ ಅನುಭೋಗ ಪ್ರಧಾನ ಅರ್ಥ ವ್ಯವಸ್ಥೆ ಮತ್ತು ಮಾರುಕಟ್ಟೆ ಪ್ರಧಾನ ಅರ್ಥವ್ಯವಸ್ಥೆ ಬೆಳವಣಿಗೆಗಳು, ಉದಾರೀಕರಣ, ಖಾಸಗೀಕರಣ, ಜಾಗತೀಕರಣ, ವಿದ್ಯಮಾನಗಳು ಅತ್ಯಾಕರ್ಷಕವೆನಿಸಿವೆ. ಇವುಗಳಿಂದಾಗಿ ವ್ಯವಸ್ಥೆಗಳು ಬದಲಾಗಿವೆ. ಬದಲಾಗಿರುವ ಸಂಧರ್ಭದಲ್ಲಿ ಧರ್ಮವು ತನ್ನ ಮಹತ್ವ ಕಳೆದುಕೊಂಡಿದೆ. ಪರಿಣಾಮವಾಗಿ ಆರ್ಥಿಕ ಸುಖವೆಂಬ ಮರೀಚಿಕೆಯ ಬೆಂಬತ್ತಿ ಸಮಾಜದಲ್ಲಿ ಅಶಾಂತಿ ಎದ್ದು ಕಾಣುವುದು. ಇದರಿಂದ ನೈತಿಕ ಮೌಲ್ಯಗಳು ಬದಲಾಗಿವೆ. ಕಾಲಕ್ಕೆ ತಕ್ಕಂತೆ ನೈತಿಕ ಮೌಲ್ಯಗಳು ಬದಲಾಗುವುದು ಸಹಜ. ಆದ್ದರಿಂದ ಧರ್ಮಕ್ಕಾಗಿ ಮತ್ತು ಅರ್ಥವ್ಯವಸ್ಥೆಗೂ ಸಂಬಂಧ ಕಲ್ಪಿಸುವುದು ಇಂದು ಅನಿವಾರ್ಯವಾಗಿದೆ. ಆದರೆ ಈ ಎರಡು ಸಮುದಾಯಗಳಲ್ಲಿ ಧರ್ಮವು ಮಹತ್ವ ಕಳೆದುಕೊಂಡಿಲ್ಲ.

ಈ ಸಮುದಾಯುಗಳಲ್ಲಿನ ಧಾರ್ಮಿಕ ರೂಪಾಂತರಕ್ಕೆ ರಾಜಶಾಹಿ, ಪುರೋಹಿತಶಾಹಿ, ವೈದಿಕೀಕರಣ, ವೈಷ್ಣವೀಕರಣ, ಶೈವಕರಣ, ಸಂಸ್ಕೃತೀಕರಣ, ಆಧುನೀಕರಣ, ಜಾಗತೀಕರಣ, ಉದಾರೀಕರಣ, ಖಾಸಗೀಕರಣ, ಅನುಭೋಗ ಪ್ರಧಾನ ಅರ್ಥವ್ಯವಸ್ಥೆ, ಮಾರುಕಟ್ಟೆ ಪ್ರಧಾನ ಅರ್ಥವ್ಯವಸ್ಥೆಗಳೇ ಪರೋಕ್ಷವಾಗಿ ಅಥವಾ ಪ್ರತ್ಯೇಕ್ಷವಾಗಿ ಕಾರಣವಾಗಿವೆ ಎಂಬುದು ಮೇಲಿನ ಅಂಶಗಳಿಂದ ಸ್ಪಷ್ಟವಾಗುವುದು.

## ಬೇಡ ಮತ್ತು ಮೇದ ಬುಡಕಟ್ಟುಗಳ ರಾಜಕೀಯ ಸ್ಥಿತ್ಯಂತರ

ರಾಜಕೀಯುವು ಸಾಮಾಜಿಕ ಆರ್ಥಿಕ ಸ್ಥಿತಿಗತಿಯುನ್ನು ನಿರ್ಧರಿಸುತ್ತದೆ ಎಂಬುದು ವಶಾಹತುಶಾಹಿ ರಾಜಕಾರಣವು ತಂದ ಆಡಳಿತ ವ್ಯವಸ್ಥೆ, ಕಾನೂನುಗಳು, ಶಾಸನಗಳು, ಆರ್ಥಿಕ ಪದ್ಧತಿಗಳಿಂದ ಭಾರತದ ಸಮಾಜದಲ್ಲಾದ ಸಾಮಾಜಿಕ–ಆರ್ಥಿಕ ಬದಲಾವಣೆಗಳು ನಿದರ್ಶನವಾಗಿರುವುದು ಅಷ್ಟೆ ಅಲ್ಲದೆ ಪ್ರಸ್ತುತ ವಿಶ್ವರಾಜಕೀಯು, ವಿಶ್ವ ಆರ್ಥಿಕತೆಯು ಪ್ರತಿನಿಧಿಯುಂತಿರುವ ಜಾಗತೀಕರಣ ವಿದ್ಯಮಾನದಿಂದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಸ್ಥಿತ್ಯಂತರಕ್ಕೊಳಗಾಗುತ್ತಿರುವುದರಿಂದ ಸ್ಪಷ್ಟವಾಗುತ್ತದೆ. ಆದರೆ ಸಮುದಾಯಗಳ ಹಿನ್ನೆಲೆಯಿಂದ ನೋಡಿದಾಗ, ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಸಮುದಾಯಗಳ ರಾಜಕೀಯ ಸ್ಥಿತಿಗತಿಗಳನ್ನು ನಿರ್ಧರಿಸುತ್ತವೆ ಅಂದರೆ ಮೇಲ್ಜಾತಿಯವರು, ಭೂಮಾಲೀಕರು, ಉನ್ನತ ವರ್ಗದವರು, ಹೆಚ್ಚು ರಾಜಕೀಯ ಸ್ಥಾನಮಾನಗಳನ್ನು ಪಡೆದುಕೊಂಡದ್ದನ್ನು ಕಂಡಾಗ ಮತ್ತು ಬಂಡವಾಳ ಶಾಹಿಗಳು, ರಾಜಕಾರಣವನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿರುವುದನ್ನು ತಿಳಿದಾಗ ಈ ಮಾತು ಸ್ಪಷ್ಟವಾಗುತ್ತದೆ.

ಬೇಡ ಮತ್ತು ಮೇದ ಸಮುದಾಯುಗಳಲ್ಲಿ ಜಾಗತೀಕರಣದಿಂದ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಬದಲಾಗುತ್ತಿವೆಯಾದರೂ ಪ್ರಸ್ತುತ ಈ ಸಮುದಾಯಗಳ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು ಈ ಸಮುದಾಯುಗಳ ರಾಜಕೀಯು ಸ್ಥಿತಿಗತಿಯುನ್ನು ನಿರ್ಧರಿಸುತ್ತವೆ.

ಭಾರತವು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿರುವದರಿಂದ ಭಾರತದ ಪ್ರಜೆಗಳೆಲ್ಲರು ಮತ ಚಲಾಯಿಸಬೇಕಾದ ಕಾರಣ. ಈ ಎರಡು ಸಮುದಾಯದ ಪ್ರಜೆಗಳು ಮತ ಚಲಾಯಿಸುತ್ತಾರೆ. ಈ ಸಮುದಾಯುಗಳಿಗೆ, ಏಕೆ ಮತ ಚಲಾಯಿಸುತ್ತೀರಿ? ಎಂದು ಪ್ರಶ್ನಿಸಿದಾಗ, ಈ ಕೆಳಗಿನ ಉತ್ತರಗಳನ್ನು ನೀಡಿದರು.

೧. ಮತ ಹಾಕುವುದು ನಮ್ಮ ಕರ್ತವ್ಯ ಎಂದು ಶೇ ೨೦% ಜನರು ಹೇಳಿದರು.

೨. ಶೇ ೪೦% ರಷ್ಟು ಜನರು ನಮ್ಮ ಜಾತಿಯ ಹಿರಿಯರು, ಲೀಡರ್‌ಗಳು ಎಲೆಕ್ಷನ್ ದಿನ ನಮಗೆ ಕರೆದುಕೊಂಡು ಹೋಗಿ ಓಟು ಹಾಕಿಸುತ್ತಾರ ಎಂದು ಹೇಳಿದರು.

೩. ಶೇ ೨೦% ಜನರು ನಮ ಪಾರ್ಟಿ ಆರಿಸಿ ಬರ್ಲಿ ಅಂತ ಹಾಕುತಿವಿ.

೪. ಶೇ ೧೩% ಜನರು ನಮ್ಮ ಗೌಡರು ಆರಿಸಿ ಬರಬೇಕು ಅಂತ ಓಟ ಹಾಕುತ್ತೀವಿ ಎಂದು ಹೇಳಿದರು.

ಮತ ಹಾಕುವುದು ನಮ್ಮ ಕರ್ತವ್ಯ ಎಂದು ಹೇಳಿದ ಶೇ ೪೦% ಜನರು ಅಲ್ಪಸ್ವಲ್ಪವಾದರು ಶಿಕ್ಷಣ ಪಡೆದವರಾಗಿದ್ದಾರೆ, ಶೇ ೪೦% ಜನರು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ತೊಡೆಗಿರುವವರಾಗಿದ್ದು ಯಾವುದೇ ರಾಜಕೀಯ, ಚುನಾವಣೆ ಮಾಡದ ಸಾಮಾನ್ಯ ಜನರಾಗಿದ್ದಾರೆ ಎಂದು ತಿಳಿಯುತ್ತದೆ. ಉಳಿದ ಶೇ.೪೦% ಜನರಲ್ಲಿ ಶೇ.೨೦% ಜನರು ಪುಡಾರಿ ರಾಜಕಾರಣಿಗಳಾಗಿದ್ದಾರೆ. ಶೇ.೧೩ ರಷ್ಟು ಜನರು ಊರಿನ ಗೌಡ ಕುಲಕರ್ಣಿ ಮುಲಾಜಿನಲ್ಲಿರುವವರು ಅಥವಾ ಅವರ ಕೈಚೀಲಗಳಂತಿರುವವರು ಆಗಿರುವರು ಎಂಬುದು ತಿಳಿಯುತ್ತದೆ. ಇದರಿಂದ ಶೇ.೩೩% ಜನರು ರಾಜಕೀಯ ವ್ಯವಸ್ಥೆಯನ್ನು ಕುರಿತು ತಿಳಿದವರಾಗಿದ್ದು, ಶೇ.೬೫% ಜನರು ರಾಜಕಾರಣಿಗಳ ಕೈಗೊಂಬೆಯಂತಿರುವುದು ಸ್ಪಷ್ಟವಾಗುವುದು.

ಈ ಸಮುದಾಯಗಳಿಗೆ ಹಿಂದೇ ಯಾವ ಪಕ್ಷವನ್ನು ಬೆಂಬಲಿಸುತ್ತಿದ್ದೀರಿ? ಎಂದು ಕೇಳಿದಕ್ಕೆ ಶೇ.೮೦% ಬೇಡರು ಕಾಂಗ್ರೆಸ್‌ನ್ನು, ಶೇ.೧೨% ದಳವನ್ನು, ಉಳಿದ ಜನರು ಬಿ.ಜೆ.ಪಿ.ಯನ್ನು ಬೆಂಬಲಿಸುತ್ತಿದ್ದು ತಿಳಿದುಬಂದಿದೆ. ಆದರೆ ಮೇದರ ಶೇ.೬೦% ಕಾಂಗ್ರೇಸ್‌ನ್ನು, ಶೇ.೩೦% ಜನರು ದಳವನ್ನು ಶೇ.೧೦%, ಜನರು ಬಿ.ಜೆ.ಪಿ.ಯನ್ನು ಬೆಂಬಲಿಸುತ್ತಿದ್ದದು ತಿಳಿಯುತ್ತದೆ. ಈ ಮೇಲಿನ ಅಂಕಿ ಅಂಶಗಳಿಂದ ಈ ಎರಡು ಸಮುದಾಯದವರು ಕಾಂಗ್ರೇಸ್ ಪಕ್ಷವನ್ನು ಬೆಂಬಲಿಸುತ್ತಿದ್ದುದ್ದು ತಿಳಿದು ಬರುತ್ತದೆ. ಕಾರಣ ಸುರಪುರ ಸಂಸ್ಥಾನದ ಮನೆತನಕ್ಕೆ ಸಂಬಂಧಿಸಿದವರೇ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿರುವುದೇ ಆಗಿದೆ. ಈ ಸಂಸ್ಥಾನದವರು ಬೇಡರಾಗಿರುವುದರಿಂದ ಬೇಡರು ಸಾಮಾನ್ಯವಾಗಿ ಈ ಪಕ್ಷವನ್ನು ಬೆಂಬಲಿಸಿದ್ದುದ್ದು ತಿಳಿಯುತ್ತದೆ. ಯಾಕೇ ಆ ಪಕ್ಷವನ್ನು ಬೆಂಬಲಿಸಿದ್ದಿರಿ? ಎಂದು ಕೇಳಿದಕ್ಕೆ ಬೇಡರಲ್ಲಿ ಶೇ. ೫೦% ಜನರು ನಮ್ಮ ದಣಿಯವರು ಅದೇ ಪಕ್ಷಕ್ಕೆ ನಿಂತಿರುವುದರಿಂದ ಎಂದು ಹೇಳಿದರೆ, ಮೇದರಲ್ಲಿ ನಮ್ಮ ದೊರೆಗಳು ಆ ಪಕ್ಷವನ್ನು ಬೆಂಬಲಿಸುತ್ತಿದ್ದರಿಂದ ನಾವು ಅದೇ ಪಕ್ಷವನ್ನು ಬೆಂಬಲಸುತ್ತಿದ್ದಿವಿ ಎಂದು ಹೇಳುವರು. ಈ ಎರಡು ಸಮುದಾಯಗಳ ಶೇ.೨೦% ಮುದುಕ ಮತ್ತು ಮುದುಕಿಯರು ನಮ್ಮವ್ವ ಇಂದಿರಮ್ಮ (ಇಂದಿರಾಗಾಂಧಿ) ನಮ್ಮ ಜನಕ್ಕೆ ಬರಗಾಲದಾಗ ಅನ್ನಕೊಟ್ಟಾಳ ಅದಕ್ಕೆ ನಾವು ಕಾಂಗ್ರೆಸ್‌ಗೆ ಓಟು ಹಾಕುತ್ತೇವೆ ಎಂದು ಹೇಳಿದರು. ಅಂದರೆ ಇದರಲ್ಲಿ ಅಂತರ್ಗತವಾಗಿರುವ ರಾಜಶಾಹಿಯ ಪ್ರಭಾವ ವ್ಯಕ್ತಿಯ ವ್ಯಕ್ತಿತ್ವ ಆದರ್ಶ, ಜಾತಿಯತೆ ಇವರು ಕಾಂಗ್ರೇಸ್ ಪಕ್ಷವನ್ನು ಬೆಂಬಲಿಸಲು ಕಾರಣವಾಗಿರುವುದು ಸ್ಪಷ್ಟವಾಗುವುದು.

ಪ್ರಸ್ತುತ ಯಾವ ಪಕ್ಷವನ್ನು ಬೆಂಬಲಿಸುತ್ತಿದ್ದೀರಿ? ಎಂದು ಕೇಳಿದ್ದಕ್ಕೆ, ಶೇ ೫೩.೩ ರಷ್ಟು ಬೇಡರು ಕಾಂಗ್ರೇಸ್‌ನ್ನು, ಶೇ ೩೩.೩ ಜನರನ್ನು ಬಿ.ಜೆ.ಪಿ.ಯನ್ನು ಬೆಂಬಲಿಸಿದರೆ, ಮೇದರಲ್ಲಿ ೫೩.೩% ಜನರು ಬಿ.ಜೆ.ಪಿ.ಯನ್ನು, ೪೦% ಜನರು ಕಾಂಗ್ರೇಸ್ ಬೆಂಬಲಿಸುತ್ತಿರುವರು, ಉಳಿದವರು ಇತರ ಪಕ್ಷಗಳನ್ನು ಬೆಂಬಲಿಸುತ್ತಿರುವುದು ಸಮುದಾಯಗಳ ಸದಸ್ಯರಿಂದ ತಿಳಿದುಬರುತ್ತದೆ.

ಏಕೆ ಈ ಪಕ್ಷವನ್ನು ಬೆಂಬಲಿಸುತ್ತಿದ್ದೀರಿ? ಎಂದು ಕೇಳಿದ್ದಕ್ಕೆ ಬೇಡರು ಸಾಮಾನ್ಯವಾಗಿ ಈ ಕೆಳಗಿನ ಉತ್ತರಗಳನ್ನು ನೀಡಿರುವರು. ೧) ನಮ್ಮ ತಾತ, ತಂದೆಯವರು ಕಾಂಗ್ರೇಸ್ ಪಕ್ಷವನ್ನು ಬೆಂಬಲಿಸುತ್ತಾ ಬಂದಿದ್ದಾರೆ. ಅದಕ್ಕಾಗಿ ಅದನ್ನು ನಾವು ಮುಂದುವರೆಸಿಕೊಂಡು ಹೋಗಬೇಕಲ್ಲಾ, ಅದಕ್ಕಾಗಿ ಆ ಪಕ್ಷವನ್ನು ಬೆಂಬಲಿಸುತ್ತೀದ್ದೇವೆ. ೨) ನಮ್ ದಣಿಗಳು ಹಿಂದೆ ನಮಗೆ ಅನ್ನ ನೀರು ಹಾಕ್ಯಾರ ಅದಕ್ಕಾಗಿ ಅವರು ಯಾವ ಕಡೆ ಇರುತ್ತಾರ, ನಾವು ಆ ಕಡೆ ಇರುತ್ತೀವಿ ಎಂಬ ಉತ್ತರಗಳನ್ನು ನೀಡಿದರು.

ಮೇದರಲ್ಲಿ ಇಂದು ಬಿ.ಜೆ.ಪಿ.ಯನ್ನು ಬೆಂಬಲಿಸುವವರು ಹೆಚ್ಚಾಗಿದ್ದು, ಏಕೆ ಆ ಪಕ್ಷವನ್ನು ಬೆಂಬಲಿಸುತ್ತೀರಿ? ಎಂದು ಅವರನ್ನು ಕೇಳಿದರೆ, ಈ ಪಕ್ಷದ ಎಂ.ಎಲ್.ಎ. ಅಭ್ಯರ್ಥಿ ಒಳ್ಳೆಯ ವ್ಯಕ್ತಿಯಾಗಿದ್ದಾನೆ. ಮತ್ತು ಜನರಿಗೆ ಒಳ್ಳೆಯದು ಮಾಡುತ್ತಾನೆ ಎಂಬ ಕಾರಣಕ್ಕಾಗಿ ಈ ಪಕ್ಷವನ್ನು ಬೆಂಬಲಿಸುತ್ತೀವಿ ಎಂದು ಹೇಳಿದರು.

ಇದರಿಂದ ಸಾಮಾನ್ಯವಾಗಿ ಬೇಡರು ತಮ್ಮ ಹಿರಿಯರು ಕಾಂಗ್ರೇಸ್‌ನ್ನು ಮಾಡುತ್ತಿದ್ದರು ಎನ್ನುವ ಕಾರಣ, ಸಂಸ್ಥಾನದ ಸಮಯದಲ್ಲಿ ರಾಜರು ಬೇಡರಿಗೆ ಮಾಡಿದ ಸಹಾಯದ ಫಲದಿಂದ, ತಮ್ಮ ಸಂಸ್ಥಾನದಲ್ಲಿಯೇ ರಾಜಾಧಿಕಾರ ಉಳಿಸಬೇಕೆನ್ನುವ ಕಾರಣಕ್ಕೆ, ಇಂತಹ ಕಾರಣಗಳಿಂದಾಗಿ ಬೇಡರು ಇಂದು ಕೂಡ ಕಾಂಗ್ರೇಸ್ ಪಕ್ಷವನ್ನೆ ಅಧಿಕ ಜನರು ಬೆಂಬಲಿಸುತ್ತಿರುವುದು. ಸಂಸ್ಥಾನದ ಸಂಬಂಧಿಕರಾದ ಕಾಂಗ್ರೇಸ್ ಪಕ್ಷದವರು ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆ. ಜನರನ್ನು ಶೋಷಿಸುತ್ತಿರವುದರಿಂದ, ಇವರಿಗಿಂತ ಬಿ.ಜೆ.ಪಿ. ಅಭ್ಯರ್ಥಿ ಒಳ್ಳೆಯವನಾಗಿರುವುದರಿಂದ ಇತ್ಯಾದಿ ಈ ಎಲ್ಲಾ ಕಾರಣಗಳಿಗೆ ಮೇದರು ಬಿ.ಜೆ.ಪಿ.ಯನ್ನು ಬೆಂಬಲಿಸುತ್ತಿರುವರು ಎಂಬುದು ಕ್ಷೇತ್ರಕಾರ್ಯದ ಸಂದರ್ಶನದಿಂದ ತಿಳಿದುಬಂದಿದೆ.

ಸುರಪುರದ ವಿಧಾನಸಭಾ ಕ್ಷೇತ್ರವು ಪರಿಶಿಷ್ಟ ಪಂಗಡಕ್ಕೆ ಮೀಸಲಾಗಿದೆ. ಈ ಮೀಸಲು ಕ್ಷೇತ್ರಕ್ಕೆ ಬೇಡ ಸಮುದಾಯದವರೇ ಕಾಂಗ್ರೇಸ್, ಬಿ.ಜೆ.ಪಿ. ಹಾಗೂ ದಳದಿಂದ ಸ್ಪರ್ಧಿಸಿದ್ದಾರೆ. ಪ್ರಸ್ತುತ ಬಿ.ಜೆ.ಪಿ. ಪಕ್ಷದ ರಾಜುಗೌಡನು ಎಮ್.ಎಲ್.ಎ. ಅಭ್ಯರ್ಥಿಯಾಗಿ ಚುನಾಯಿತನಾಗಿದ್ದಾನೆ.

ಈ ಎರಡು ಸಮುದಾಯಗಳಲ್ಲಿ ಬೇಡರು ಬಹುಸಂಖ್ಯಾತರಾಗಿದ್ದು, ಅವರೆ ಎಲ್ಲಾ ರಾಜಕೀಯ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಪುರಸಭೆ, ಗ್ರಾಮ ಪಂಚಾಯತಿ, ತಾಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ, ವಿಧಾನ ಸಭಾಕ್ಷೇತ್ರ ಇತ್ಯಾದಿ ಮೀಸಲು ಕ್ಷೇತ್ರಗಳ ಲಾಭವನ್ನು ಬೇಡರೆ ಪಡೆದಿದ್ದಾರೆ. ಆದರೆ ಅಲ್ಪಸಂಖ್ಯಾತರಾದ ಮೇದರು ಇವುಗಳ ಲಾಭ ಪಡೆಯಲು ಸಾಧ್ಯವಾಗುತ್ತಿಲ್ಲ. ಈ ಸಮುದಾಯದವರನ್ನು ನಿಮ್ಮ ಸಮುದಾಯಕ್ಕೆ ರಾಜಕೀಯ ಮೀಸಲಾತಿ ದೊರಕಿದೆಯೇ? ಎಂದು ಪ್ರೇಶ್ನಿಸಿದರೆ, ಇಲ್ಲಿಯುವರೆಗೆ ಸಿಕ್ಕಿರಲಿಲ್ಲ ಈ ಸಲ ಪುರಸಭೆ ಹಂತದಲ್ಲಿ ದೊರಕಿದೆ ಎಂದು ಹೇಳಿದರು. ಆದರೆ ರಾಜಕೀಯ ತಾರತಮ್ಯದಿಂದ ನಮಗೆ ಸಿಗಬೇಕಾದ ರಾಜಕೀಯ ಮೀಸಲಾತಿ ಸಿಗುತ್ತಿಲ್ಲ ಎಂಬ ಕೊರಗು ಕೆಲವು ಮೇದರಲ್ಲಿದೆ.

ಇಷ್ಟೇಲ್ಲಾ ರಾಜಕೀಯ ಮಿಸಲಾತಿಯುನ್ನು ಪಡೆದುಕೊಂಡ ಬೇಡರು ಸಮುದಾಯಕ್ಕೆ ಒಳಿತಾಗಿಲ್ಲ ಎಂದು ಕ್ಷೇತ್ರ ಕಾರ್ಯದ ಅವಲೋಕನದಿಂದ ತಿಳಿಯುತ್ತದೆ. ಕಾರಣ ಮೀಸಲಾತಿ ಪಡೆದು ಕುಟುಂಬದ ಸಂಬಂಧಿಕರು ತಮ್ಮ ಅಭಿವೃದ್ಧಿ ಮಾಡಿಕೊಳ್ಳುತ್ತಾರೆಯೇ ವಿನಃ ಸಮುದಾಯದ ಅಭಿವೃದ್ಧಿಯ ಮಾಡುವುದಿಲ್ಲ. ತಮ್ಮ ಸಮುದಾಯದ ಸೌಲಭ್ಯದ ಹೆಸರಲ್ಲಿ ಬಂದ ಸೌಲಭ್ಯಗಳನ್ನು ಈ ಮೀಸಲಾತಿಯಿಂದ ಬಂದ ರಾಜಕಾರಣಿಗಳೇ ಪಡೆದುಕೊಳ್ಳುವರು. ಇವರು ಸಮುದಾಯದ ದೀನರ, ಬಡವರ ಕಡೆಗೆ ಗಮನ ಹರಿಸುವುದೇ ಇಲ್ಲ. ಇವರು ಪಕ್ಷದ ಕೈಗೊಂಬೆಯಾಗಿರುವುದರಿಂದ ಪಕ್ಷ ಹೇಳಿದಂತೆ ಕೇಳಬೇಕಾದ ಅನಿವಾರ್ಯತೆ ಇರುವುದರಿಂದ ಸಮುದಾಯಕ್ಕೆ ಕೊಡುಗೆ ಕೊಡಲು ಸಾಧ್ಯವಾಗುವುದಿಲ್ಲ. ಅಲ್ಲದೆ ಮುಂದಿನ ಚುನಾವಣೆಗಳನ್ನು ಎದುರಿಸಬೇಕಾದರೆ ಹಣ ಬೇಕಾಗುವುದರಿಂದ ಅಧಿಕಾರದಲ್ಲಿರುವಾಗಲೇ ಈ ರೀತಿ ಹಣವನ್ನು ಗಳಿಸಿಕೊಳ್ಳುವರು.

ಇಂತಹ ರಾಜಕೀಯ ಮಿಸಲಾತಿಯಿಂದ ನಿಮ್ಮ ಸಮುದಾಯಕ್ಕೆ ಒಳಿತಾಗಿದೆಯೇ? ಎಂದು ಕೇಳಿದಕ್ಕೆ, ಶೇ ೫೩.೩ ರಷ್ಟು ಜನರು ಒಳಿತಾಗಿದೆ ಎಂದು ಹೇಳಿದರೆ, ಶೇ ೪೦% ಜನರು ಒಳಿತಾಗಿಲ್ಲ ಎಂದು ಹೇಳಿದರು. ಏಕೆ ಒಳಿತಾಗಿಲ್ಲ? ಎಂದು ಕೇಳಿದ್ದಕ್ಕೆ. ನಮ್ಮ ಸಮುದಾಯದವರೇ ಎಲ್ಲಾ ಪಕ್ಷಗಳ ಅಭ್ಯರ್ಥಿಯಾಗಿ ನಿಲ್ಲುವುದರಿಂದ ಯಾರಿಗೆ ಮತ ಕೊಡಬೇಕು ಎಂದು ಸಾಮಾನ್ಯ ಜನರು ಗೊಂದಲಕ್ಕೀಡಾಗುವರು ಅಷ್ಟೆ ಅಲ್ಲದೆ ಗುಂಪುಗಳಾಗಿ ವಿಂಗಡಣೆಯಾಗುವುದು. ಈ ಗುಂಪುಗಳ ನಡುವೆ ದ್ವೇಷ, ಅಸೂಯೆ, ಅಧಿಕಾರದ ದಾಹ ಉಂಟಾಗಿ ಜಗಳ, ಸಂಘರ್ಷಗಳು ಏರ್ಪಡಲಾರಂಭಿಸಿವೆ. ಇದರಿಂದ ಸಮಾಜದ ಐಕ್ಯತೆಗೆ ಧಕ್ಕೆ ತಂದಿದೆ ಎಂದು ಈ ಸಮುದಾಯದ ಸದಸ್ಯರು ಹೇಳುವರು.

ಈ ಮೀಸಲಾತಿಯಿಂದ ಸಮುದಾಯಕ್ಕೆ ಒಳಿತಾಗುತ್ತಿದೆ ಎಂದವರನ್ನು, ಹೇಗೆ ಒಳಿತಾಗುತ್ತಿದೆ ಎಂದು ಕೇಳಿದರೆ ಸಮುದಾಯವು ಮೊದಲು ರಾಜಕೀಯವಾಗಿ ಭಾಗವಹಿಸಲು ಸಾಧ್ಯವಾಗುತ್ತಿರಲಿಲ್ಲ. ಕಾರಣ ಮೇಲ್ಜಾತಿಯವರು, ಶ್ರೀಮಂತರ ಎದುರು ನಿಂತು ಆರಿಸಿ ಬರುವಷ್ಟು ಸಾಮರ್ಥ್ಯ ಪಡೆದುಕೊಂಡಿರಲಿಲ್ಲ. ಈ ಮೀಸಲಾತಿಯಿಂದ ರಾಜಕೀಯದ ಕೆಲವು ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುವುದು ಎಂದು ಹೇಳಿರುವರು.

ಈ ಎಲ್ಲಾ ರಾಜಕೀಯ ಪಕ್ಷಗಳೂ ಮೇಲ್ಜಾತಿಯವರ, ಮೇಲ್ವರ್ಗದವರ ಹತೋಟಿಯಲ್ಲಿರುವುದರಿಂದ ಗ್ರಾಮಪಂಚಾಯಿತಿ, ತಾಲೂಕುಪಂಚಾಯಿತಿ ಮಟ್ಟಗಳಲ್ಲಿಯ ಮೀಸಲಾತಿ ಕ್ಷೇತ್ರಗಳಿಗೆ ಮೇಲ್ಜಾತಿಯವರು, ಊರಿನ ಗೌಡ, ಕುಲಕರ್ಣಿಯವರು ತಮ್ಮ ಮಾತು ಕೇಳುವವರಿಗೆ ರಾಜಕೀಯ ಟಿಕೇಟ್ ಕೊಡುವುದರಿಂದ, ಮೀಸಲಾತಿಯಿಂದ ಆರಿಸಿ ಬಂದ ಸದಸ್ಯರು ಅವರ ಕೈಗೊಂಬೆಯಾಗುತ್ತಾರೆ. ಇವರಿಗೆ ಸಮುದಾಯದ ಹಿತಾಸಕ್ತಿಗಿಂತ ಗೌಡಕುಲಕರ್ಣಿಯವರ ಹಿತಾಸಕ್ತಿ ಪ್ರಮುಖವಾಗಿರುತ್ತವೆ. ಈ ಪ್ರದೇಶದಲ್ಲಿ ಕೆಲವು ಊರುಗಳಲ್ಲಿ ಗೌಡ ಕುಲಕರ್ಣಿಯವರು ಬೇಡರಾಗಿದ್ದರೂ ಕೂಡ ಸಾಮಾನ್ಯರು ಶೋಷಿತರಾಗಿರುವರು.

ಈ ಮೀಸಲಾತಿ ಸಮುದಾಯದ ಒಗ್ಗಟ್ಟು ಒಡೆದು ಸಂಘರ್ಷ, ಜಗಳಕ್ಕೆ ನಾಂದಿ ಹಾಡುವುದು, ಎಲ್ಲಾ ಸೌಲಭ್ಯಗಳು ಸಮುದಾಯಕ್ಕೆ ಉಪಯೋಗವಾಗದೆ ಕೇವಲ ಒಬ್ಬನ ಸ್ವತ್ತಾಗುವುದು, ಅಲ್ಲದೆ ಮೇಲ್ಜಾತಿಯವರ ಹಿಡಿತ ಮತ್ತಷ್ಟು ಬಿಗಿಗೊಳ್ಳುವುದು ಈ ಮೀಸಲಾತಿಯಿಂದ ಎಂದು ಸ್ಪಷ್ಟವಾಗುವುದು.

ಈ ರಾಜಕೀಯ ಪಕ್ಷಗಳ ಪರಿಶಿಷ್ಠ ಪಂಗಡದ ತಾಲೂಕು ಘಟಕಗಳು, ಗ್ರಾಮಗಳ ಘಟಕಗಳ, ತಾಲೂಕು ಸಾಮಾನ್ಯ ಘಟಕಗಳ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯದರ್ಶಿಸ್ಥಾನಗಳು ಬೇಡ ಸಮುದಾಯದವರೇ ಪಡೆದುಕೊಂಡಿದ್ದಾರೆ. ಆದರೆ ಮೇದರ ಇದರಿಂದ ದೂರ ಉಳಿದಿದ್ದಾರೆ.

ಈ ಎರಡು ಸಮುದಾಯಗಳು ಯಾವುದೇ ಚಳುವಳಿಗಳಲ್ಲಿ ಭಾಗವಹಿಸದಿದ್ದರೂ ಕೂಡ ತಮ್ಮ ಸಮುದಾಯಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸಲು ಕೆಲವು ಸೌಲಭ್ಯಗಳನ್ನು ಪಡೆಯಲು ಸಾಂಘಿಕ ಹೋರಾಟ ಮಾಡಿದ್ದು ತಿಳಿಯುತ್ತದೆ. ಈ ಎರಡು ಸಮುದಾಯಗಳು ಜಾತಿ ಸಂಘಟನೆಗಳನ್ನು ಹೊಂದಿವೆ. ಆದರೆ ಈ ಸಂಘಟನೆಗಳು ಕೇವಲ ಲೇಟರ್ ಹೆಡ್ ಸಂಘಟನೆಗಳಾಗಿ ಉಳಿದಿದ್ದು ತಿಳಿದು ಬಂದಿದೆ. ಈ ಸಮುದಾಯಗಳ ಜನರು ಸಾಮಾನ್ಯವಾಗಿ ದುಡಿಯುವ ಜನರಾಗಿರುವುದರಿಂದ ಯಾವುದೇ ಬೇರೆ ಸಂಘಟನೆಗಳಲ್ಲಿ ತೊಡಗಿರುವುದು

ಕಂಡು ಬರುವುದಿಲ್ಲ. ಆದರೆ ಇಂದಿನ ಯುವಕರು ಕೆಲವು ಬೇರೆ ಬೇರೆ ಸಂಘಟನೆಗಳಲ್ಲಿ ತೊಡಗಿಕೊಂಡಿರುವುದು ತಿಳಿಯುತ್ತದೆ.

ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್, ಬಿ.ಜೆ.ಪಿ., ದಳ ಪಕ್ಷಗಳನ್ನು ಈ ಸಮುದಾಯದವರು ಬೆಂಬಲಿಸುವರು. ಜಾಗತೀಕರಣದ ಪ್ರಭಾವವನ್ನು ಮೊದಲು ಈ ರಾಜಕೀಯ ಪಕ್ಷಗಳ ಮೇಲೆ ಆಗುವುದು. ಸುರಪುರ ತಾಲೂಕಿನ ಮೇದ ಮತ್ತು ಬೇಡ ಬುಡಕಟ್ಟುಗಳ ಈ ರಾಜಕೀಯ ಪಕ್ಷಗಳ ಬೆಂಬಲಿಗರಾದ್ದರಿಂದ ಇವರ ರಾಜಕೀಯ ಬದುಕು ಕೂಡ ಸ್ಥಿತ್ಯಂತರಕ್ಕೊಳಗಾಗುವುದು. ಮೊದಲು ರಾಜಕೀಯದಿಂದ ದೂರ ಉಳಿದಿದ್ದ ಈ ಸಮುದಾಯಗಳು, ಪ್ರಜಾಸತ್ತಾತ್ಮಕ ವ್ಯವಸ್ಥೆಯಿಂದ, ಮೀಸಲಾತಿಯಿಂದ, ರಾಜಕೀಯ ಪಕ್ಷಗಳ ಓಟಬ್ಯಾಂಕ್ ರಾಜಕಾರಣದಿಂದ, ಜಾತಿಯತೆಯ ಪ್ರಭಾವದಿಂದ, ಇತ್ಯಾದಿ ಕಾರಣಗಳಿಂದ ರಾಜಕೀಯ ಸ್ಥಿತಿಯಲ್ಲಿ ಬದಲಾವಣೆಯ ಪ್ರಕ್ರಿಯೆ ನಡೆದೆ ಇದೆ. ಅಷ್ಟೆ ಅಲ್ಲದೆ ಕೈಗಾರಿಕೀಕರಣ, ನಗರೀಕರಣ, ಆಧುನಿಕ ಶಿಕ್ಷಣ, ಆಧುನಿಕ ವಿಜ್ಞಾನ, ಇತ್ಯಾದಿ ಅಂಶಗಳು ಈ ಸಮುದಾಯಗಳ ರಾಜಕೀಯ ಸ್ಥಿತ್ಯಂತರಕ್ಕೆ ಕಾರಣವಾಗಿದೆ.

**ಬೇಡ ಮತ್ತು ಮೇದ ಬುಡಕಟ್ಟುಗಳು ಶೈಕ್ಷಣಿಕ ಸ್ಥಿತ್ಯಂತರ**

ಜ್ಞಾನ ಸಂಪಾದನೆ ಅಥವಾ ಕಲಿಕೆಯ ಪ್ರಕ್ರಿಯೆಯೇ ಶಿಕ್ಷಣವಾಗಿದೆ. ಅಂದರೆ ಪ್ರಾಚೀನ ಸಮಾಜಗಳಲ್ಲಿ ಮಕ್ಕಳು ತಂದೆತಾಯಿಯರು ಮಾಡುವ ಕೆಲಸ ಕಾರ್ಯಗಳನ್ನು ಗಮನಿಸುತ್ತಾ, ತಮ್ಮ ಸುತ್ತಮುತ್ತಣ ಪರಿಸರದ ಹಿರಿಯರು ಮಾಡುವುದನ್ನು ನೋಡುತ್ತಾ, ಅದೇ ರೀತಿಯಲ್ಲಿ ಅನುಕರಿಸುತ್ತಿದ್ದರು. ಕೆಲವೊಮ್ಮೆ ತಂದೆ-ತಾಯಿಯರು ತಮ್ಮ ಮಕ್ಕಳಿಗೆ ಬೇಟೆಯಾಡುವ, ಕೃಷಿ ಕಾರ್ಯಮಾಡುವ, ಬಡಿಗತನ ಮಾಡುವ, ಕುಂಬಾರಿಕೆ ಮಾಡುವ ಇತ್ಯಾದಿ ಕುಲಕಸುಬುಗಳು ಮಾಡುವ ಕ್ರಮಗಳ ಬಗ್ಗೆ ಸಲಹೆ ಸೂಚನೆ ನೀಡುತ್ತಿದ್ದರು. ಇಂತಹ ಶಿಕ್ಷಣ ನೀಡುವ ಹೊಣೆಗಾರಿಕೆ ಕುಟುಂಬದ್ದೇ ಆಗಿತ್ತು. ಅಂದರೆ ಶಿಕ್ಷಣವು "ಆದಿಕಾಲದಿಂದಲೂ ಸಮಾಜದ ಆಸ್ಥೆಯ ವಿಷಯವಾಗಿ ಬೆಳೆದು ಬಂದಿದೆ. ಆದರೆ ಶಿಕ್ಷಣದ ರೂಪ ಸ್ವರೂಪ ಮತ್ತು ಗುಣಮಟ್ಟವು ಸಮಾಜದ ಬೆಳವಣಿಗೆಯ ಹಂತವನ್ನು ಅವಲಂಬಿಸಿರುತ್ತದೆ. ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ಸಂವರ್ದನೆಗೆ ಎಷ್ಟು ಅವಶ್ಯವೋ ಸಮಾಜದ ಸ್ಥಿರತೆಗೆ, ಭದ್ರತೆಗೆ ಐಕ್ಯಮತ್ಯದ ಸ್ಥಾಪನೆಗೆ ಅಷ್ಟೆ ಅಗತ್ಯ. ಸಾಮಾಜಿಕ ನಿಯಂತ್ರಣ ಹಾಗೂ ಪರಿವರ್ತನೆಯ ಸಾಧನವಾಗಿ, ಸಾಂಸ್ಕೃತಿಕ ಸಂಚರಣೆಯ ಪ್ರಭಾವೀ ಮಾಧ್ಯಮವಾಗಿ ಮತ್ತು ಇಂದಿನ ಆಧುನಿಕ ಸಮಾಜದ ಉದ್ಯೋಗ ಕ್ಷೇತ್ರದ ತರಬೇತಿಯ ಕೇಂದ್ರವಾಗಿದೆ."[೨] ಕಾರಣ ಶಿಕ್ಷಣ ಹೊರತುಪಡಿಸಿ ಜೀವನ

ಕಲ್ಪಿಸುವುದು ಅಸಾಧ್ಯವೆಂಬಂತಾಗಿದೆ. ಹಾಗೆಯೇ "ಆಧುನಿಕ ಶಿಕ್ಷಣ ವ್ಯವಸ್ಥೆಯಿಂದ ಕೆಳಜಾತಿಗಳು ಹೊಸಬಗೆಯ ಎಚ್ಚರ ಪಡೆದುಕೊಂಡಿವೆ. ತಮ್ಮ ಹಕ್ಕುಗಳನ್ನು ನೆನಪಿಸಿಕೊಂಡಿವೆ. ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ ತಿರಸ್ಕೃತ ಸಮಾಜಕ್ಕೂ ಬಹುದೊಡ್ಡಶಕ್ತಿಯನ್ನು ತಂದುಕೊಡುತ್ತದೆ. ಇಲ್ಲಿ ಶೈಕ್ಷಣಿಕ ರೂಪಾಂತರಗಳಿಗೆ ಈ ಎಲ್ಲಾ ಸಮುದಾಯುಗಳು ಒಳಗಾಗುತ್ತಿವೆ. ಶಿಕ್ಷಣಕ್ಕೆ ರೂಪಾಂತರಗೊಳ್ಳುವುದರಿಂದ ತನ್ನ ಸಂಸ್ಕೃತಿಯಿಂದ ದೂರಸರಿಯುವ ಸಾಧ್ಯತೆಗಳು ಇರಬಲ್ಲವಾದರೂ ಅವರ ಅಭಿವೃದ್ಧಿ ಹಾದಿಯಲ್ಲಿ ಅವನ್ನು ಸಕಾರಾತ್ಮಕವಾಗಿಯೇ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಬುಡಕಟ್ಟುಗಳು ಶೈಕ್ಷಣಿಕವಾಗಿ ರೂಪಾಂತರ! ಗೊಳ್ಳುವುದೆಂದರೆ ಅದು ಸ್ವಾತಂತ್ರ್ಯವನ್ನು ಹುಡುಕುವುದೆಂದೆ ಅರ್ಥ."[೧೩]

ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯಗಳು ಇಂತಹ ಸ್ವಾತಂತ್ರ್ಯವನ್ನು ಹುಡುಕುವ ಹವಣಿಕೆಯುಲ್ಲಿವೆ. ಈ ಸಮುದಾಯುಗಳಿಗೆ ಜಾಗತೀಕರಣದ ದಿಡ್ಡಿಬಾಗಿಲು ತೆರೆಯಬೇಕಾದ ಅನಿವಾರ್ಯತೆ ಮತ್ತು ಅಗತ್ಯವಿದೆ. ಅದಕ್ಕಾಗಿ ಇವು ಶಿಕ್ಷಣವನ್ನು ಕಲಿಯಲೇಬೇಕು.

ಆದರೆ "ಭಾರತದಂತಹ ದೇಶದಲ್ಲಿ ಮೇಲ್ವರ್ಗಗಳ ಅಥವಾ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವವರ ಸ್ವತ್ತಾಗಿಯೇ ಉಳಿದುಬಿಟ್ಟದೆ. ಇಂದಿನ ಉನ್ನತ ಶಿಕ್ಷಣವು ಕೇವಲ ಶ್ರೀಮಂತ ವರ್ಗಗಳಿಗೆ ಮೀಸಲು ಎಂಬ ಸ್ಥಿತಿ ನಿರ್ಮಾಣವಾಗಿದೆ. ಆದರೆ ಒಂದು ದೇಶದ ಶೈಕ್ಷಣಿಕ ವ್ಯವಸ್ಥೆಯ ಸ್ಥಿತಿಗತಿಯನ್ನು ಆ ದೇಶದಲ್ಲಿ ಬದುಕುತ್ತಿರುವ ಸಾಕ್ಷರತೆಯ ಮೂಲಕ, ಅಂದರೆ ಅಕ್ಷರ ಬರೆಯಲು ಮತ್ತು ಓದಲು ಬರುವ 'ಪ್ರಾಥಮಿಕ ಹಂತವನ್ನು' ಮಾನದಂಡವಾಗಿಸಿಕೊಂಡು ಈ ಲೆಕ್ಕಚಾರ ಮಾಡಲಾಗುತ್ತದೆ. ಆದರೆ ಭಾರತದಂತಹ ಅಸಮಾನ ನೆಲೆಯ ಸಮಾಜದಲ್ಲಿ ಅಸಾಧಾರಣ ಏರುಪೇರುಗಳಿವೆ. ಶಿಕ್ಷಣ 'ಇಂತವರಿಗೆ' ಮಾತ್ರ ಮೀಸಲು ಎನ್ನುವ ಸಾಮಾಜಿಕ ಕಾನೂನುಗಳನ್ನು ಸಾವಿರಾರು ವರ್ಷಗಳಿಂದ ಘೋಷಿಸಿಕೊಂಡು ಬಂದ ದೇಶ ಇದು. ಇಂತಹ ದೇಶದಲ್ಲಿ ಈ ಸಮಾಜದ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ, ಮತ್ತು ಅಂಚಿನ ಸಮುದಾಯುಗಳಿಗೆ ಶಿಕ್ಷಣವೆಂಬುದು ಗಗನಕುಸುಮ. ಈ ಕಾರಣದಿಂದಾಗಿ ಈ ಸಮುದಾಯಗಳು ಕೇವಲ ಶ್ರಮದಾಯಕ ದುಡಿಮೆಗಳಲ್ಲಿ ಮಾತ್ರ ಶತಮಾನಗಳಿಂದ ತೊಡಗಿಕೊಂಡೆ ಬಂದಿದೆ."[೧೪]

ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಕೆಳಜಾತಿಗಳಾಗಿದ್ದಲ್ಲದೆ ಶ್ರಮದಾಯಕ ದುಡಿಮೆಯುಲ್ಲಿ ತೊಡಗಿವೆ. ಆದ್ದರಿಂದ ಈ ಸಮುದಾಯುಗಳ ಸಾಕ್ಷರತಾ ಮಟ್ಟ ಮತ್ತು ಶೈಕ್ಷಣಿಕ ಮಟ್ಟ ತುಂಬಾ ಕಡಿಮೆ ಇದೆ. ಕರ್ನಾಟಕದ ಒಟ್ಟಾರೆಯ ಸಾಕ್ಷರತಾ ಪ್ರಮಾಣ ಮತ್ತು

ಪರಿಶಿಷ್ಟ ಜಾತಿ ಹಾಗೂ ಪಂಗಡಗಳ ಸಾಕ್ಷರತೆಯ ಪ್ರಮಾಣವನ್ನು ೨೦೦೧ರ ಜನಗಣತಿಯ ಮೂಲಕ ಪಡೆದ ಈ ಕೆಳಗಿನ ಕೋಷ್ಟಕದಿಂದ ಕಂಡು ಕೊಳ್ಳಲಾಗಿದೆ.

**ಕೋಷ್ಠಕ: ಕರ್ನಾಟಕ ಸಾಕ್ಷರತೆ : ಜನಗಣತೀ ೨೦೦೧**

| ಕ್ರ.ಸಂ. | ವಿವರಗಳು | ಒಟ್ಟು | ಮಹಿಳೆಯರು | ಪುರುಷರು |
|---|---|---|---|---|
| ೧. | ರಾಜ್ಯದ ಒಟ್ಟು ಜನಸಂಖ್ಯೆ | ಶೇ. ೬೭.೦೪ | ೫೭.೪೫ | ೭೬.೨೯ |
| ೨. | ಪರಿಶಿಷ್ಟಜಾತಿ | ಶೇ. ೫೨.೯೦ | ೪೧.೭೦ | ೬೩.೮೦ |
| ೩. | ಪರಿಶಿಷ್ಟ ವರ್ಗ | ಶೇ. ೪೮.೩೦ | ೩೬.೬೦ | ೫೯.೭೦ |
| ೪. | ಅಂತರಃ ಪ.ಜಾ.(೧-೨) | ಶೇ. ೧೪.೧೫ | ೧೫.೭೫ | ೧೨.೪೯ |
| ೫. | ಅಂತರಃ ಪ.ಪಂ.(೧.೩) | ಶೇ. ೧೪.೭೫ | ೨೦.೮೫ | ೧೬.೫೯ |

(ವಿಜಯಲಕ್ಷ್ಮೀ ಆರ್, ೨೦೦೮, ಪುಟ-೧೫೩)

ಈ ಕೋಷ್ಠಕದ ಪ್ರಕಾರ ಪರಿಶಿಷ್ಟೇತರ ಶಿಷ್ಟವರ್ಗಗಳ ಸಾಕ್ಷರತೆ ಪ್ರಮಾಣ ಶೇ ೬೭.೦೪ ರಷ್ಟಿದೆ. ಮಹಿಳೆಯರು ಶೇ ೫೭.೪೫% ಮತ್ತು ಪುರುಷರು ೭೬.೨೯ರಷ್ಟು ಸಾಕ್ಷರರಾಗಿದ್ದಾರೆ. ಆದರೆ ಪರಿಶಿಷ್ಟ ಜಾತಿಯ ಒಟ್ಟಾರೆಯ ಸಾಕ್ಷರತೆ ಶೇ ೫೨.೯೦ರಷ್ಟಿದ್ದರೆ, ಪುರುಷರು ಶೇ ೬೩.೮೦ ಮತ್ತು ಸ್ತ್ರೀಯರು ಶೇ ೪೧.೭೦ ರಷ್ಟಿದೆ. ಪರಿಶಿಷ್ಟ ಪಂಗಡದ ಒಟ್ಟಾರೆ ಸಾಕ್ಷರತೆ ೪೮.೩೦ ಇವರಲ್ಲಿ ಶೇ ೫೯.೭೦ ಪುರುಷ ಮತ್ತು ೩೬.೬೦ರಷ್ಟು ಸ್ತ್ರೀಯರು ಸಾಕ್ಷರತೆಯನ್ನು ಹೊಂದಿದ್ದಾರೆ. ಈ ಅಂಕಿ ಸಂಖ್ಯೆಗಳನ್ನು ಇಟ್ಟುಕೊಂಡು ಮೇದ ಮತ್ತು ಬೇಡ ಸಮುದಾಯಗಳ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದಾಗ, ಬೇಡರ ಸಾಕ್ಷರತಾ ಪ್ರಮಾಣ ಅಂದಾಜು ೩೩.೧೩ ರಷ್ಟು ಇದ್ದರೇ ಮೇದರ ಸಾಕ್ಷರತೆ ಪ್ರಮಾಣ ೪೯.೫೦ರಷ್ಟಿದೆ.

## ಬೇಡರ ಶೈಕ್ಷಣಿಕ ಮಟ್ಟ

೨೦೦೧ ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟಾರೆಯ ಸಾಕ್ಷರತೆಯ ಪ್ರಮಾಣ ಗಣನೀಯವಾಗಿ ಕಡಿಮೆ ಇರುವುದು ಕಂಡು ಬರುವುದು. ಇದಕ್ಕೆ ಕಾರಣ ಈ ಸಮುದಾಯದ ಆರ್ಥಿಕ ಸ್ಥಿತಿ ಎಂಬುದು ಸ್ಪಷ್ಟವಾಗುತ್ತದೆ. ಈ ಸಮುದಾಯದ ಶೇ ೪೫ರಷ್ಟು ಜನ ನಿತ್ಯದ ಬದುಕನ್ನು ನಿರ್ವಹಿಸುವ ಪ್ರಶ್ನೆಯ ಮುಖ್ಯವಾಗಿರುವಾಗ ಹೇಗೆ ಇವರು ಅಕ್ಷರ ಲೋಕಕ್ಕೆ ಪ್ರವೇಶ ಪಡೆಯಲು ಸಾಧ್ಯ? ಆರ್ಥಿಕವಾಗಿ ಹಿಂದುಳಿದ ಈ ಸಮುದಾಯ ವಿಪರೀತ ಸ್ಪರ್ಧೆಯ ವರ್ತಮಾನವನ್ನು ಹೇಗೆ ತಾನೇ ಎದುರಿಸಲು ಸಾಧ್ಯ? ಬೇಡ ಸಮುದಾಯಗಳು

ವಾಸಿಸುವ ಊರುಗಳಲ್ಲಿ ಸಮುದಾಯವು ಆರ್ಥಿಕವಾಗಿ ದುಃಸ್ಥಿತಿಯಲ್ಲಿದೆಯೋ ಆ ಎಲ್ಲಾ ಊರುಗಳಲ್ಲಿ ಈ ಸಮುದಾಯದ ಸಾಕ್ಷರತೆಯ ಪ್ರಮಾಣವು ಅತ್ಯಂತ ಕಡಿಮೆ ಇರುವುದು ಕಂಡು ಬರುತ್ತದೆ.

**ಕೋಷ್ಟಕ: ಬೇಡರ ಶೈಕ್ಷಣಿಕ ಮಟ್ಟ**

| ಕ್ರ.ಸಂ. | ಶೈಕ್ಷಣಿಕ ಹಂತ | ಒಟ್ಟು ಶೇ | ಮಹಿಳೆಯರು | ಪುರುಷರು |
|---|---|---|---|---|
| ೧. | ಪ್ರಾಥಮಿಕ | ೩೪.೮೨ | ೪೭ | ೪೧ |
| ೨. | ಮಾಧ್ಯಮಿಕ | ೧೬.೫೧ | ೧೬ | ೨೧ |
| ೩. | ಪ್ರೌಢಶಾಲೆ | ೨೦.೫೩ | ೧೫ | ೩೧ |
| ೪. | ಡಿಪ್ಲೋಮಾ | ೦.೮೯ | – | ೨ |
| ೫. | ಪದವಿ ಪೂರ್ವ | ೧೬.೯೬ | ೯ | ೨೯ |
| ೬. | ಪದವಿ | ೬.೨೪ | ೪ | ೧೦ |
| ೭. | ಸ್ನಾತಕೋತ್ತರ ಪದವಿ | ೦.೪೪ | – | ೧ |
| ೮. | ಇತರೆ | ೩.೫೭ | ೨ | ೬ |

ಹೀಗೆ ಸಮುದಾಯದ ಆರ್ಥಿಕತೆಯು ಕಾರಣ ಶಿಕ್ಷಣದ ಸ್ಥಿತಿಗತಿಗಳಲ್ಲಿ ಬದಲಾವಣೆಯಾಗುವುದು. ಬೇಡ ಸಮುದಾಯಗಳ ನೆಲೆಸುವ ಊರುಗಳಲ್ಲಿ ಸಾಮಾನ್ಯವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿವೆ.

ಆದ್ದರಿಂದಲೇ ಪ್ರಾಥಮಿಕ, ಮಾಧ್ಯಮಿಕ, ಶಿಕ್ಷಣದ ಮಟ್ಟ ಈ ಸಮುದಾಯಗಳಲ್ಲಿ ಜಾಸ್ತಿಯಾಗಿದ್ದು, ಮುಂದೆ ಹೋದಂತೆಲ್ಲಾ ಇಳಿಮುಖವಾಗುತ್ತದೆ. ಅದರಲ್ಲೂ ಮಾಧ್ಯಮಿಕ ಶಿಕ್ಷಣಕ್ಕಿಂತ ಪ್ರಾಥಮಿಕ ಶಿಕ್ಷಣದ ಮಟ್ಟ ಹೆಚ್ಚಾಗಿರುವುದರಿಂದ ಶಾಲೆ ಬಿಡುವ ಮಕ್ಕಳ ಸಂಖ್ಯೆ ಈ ಸಮುದಾಯದಲ್ಲಿ ಇದೆ ಎಂದು ತಿಳಿಯುತ್ತದೆ. ಈ ಸಮುದಾಯದವರು ಹೆಚ್ಚಾಗಿ ಕೃಷಿ, ಕೃಷಿಕೂಲಿ ಕೆಲಸದಲ್ಲಿ ತೊಡಗಿರುವರು. ಕಾರಣ ಈ ಕೆಲಸಗಳಿಗೆ ಸಾಂದರ್ಭಿಕವಾಗಿ ಹೆಚ್ಚು ಕೆಲಸಗಾರರು ಬೇಕಾಗುವುದರಿಂದ ಮಕ್ಕಳನ್ನು ಶಾಲೆ ಬಿಡಿಸಿ ಈ ಉದ್ಯೋಗದಲ್ಲಿ ತೊಡುಗುವಂತೆ ಮಾಡುವರು. ಇವರು ಹೆಚ್ಚಾಗಿ ಗ್ರಾಮವಾಸಿಗಳಾಗಿದ್ದಾರೆ. ಸುರಪುರ ಪಟ್ಟಣದಲ್ಲಿರುವ ಬೇಡರು ಸಹ ಶೈಕ್ಷಣಿಕವಾಗಿ ಬಹಳ ಹಿಂದುಳಿದಿದ್ದಾರೆ. ಕಾರಣ ಇವರೆಲ್ಲ ದಿನ ನಿತ್ಯದ ಬದುಕಿನ ಕೆಲಸ ಮಾಡಿ ಜೀವನ ಸಾಗಿಸುವವರಾಗಿದ್ದು, ಆರ್ಥಿಕವಾಗಿ ದುರ್ಬಲವಾಗಿದ್ದಾರೆ.

**ಮೇದ ಸಮುದಾಯದ ಸಾಕ್ಷರತೆಯ ಪ್ರಮಾಣ ಮತ್ತು ಶೈಕ್ಷಣಿಕ ಮಟ್ಟ**

೨೦೦೧ ರ ಜನಗಣತಿಯ ಪ್ರಕಾರ ರಾಜ್ಯದ ಒಟ್ಟಾರೆಯ ಸಾಕ್ಷರತೆಯ ಪ್ರಮಾಣಕ್ಕಿಂತ ಮೇದ ಸಮುದಾಯದ ಸಾಕ್ಷರತೆ ಪ್ರಮಾಣ ಗಣನೀಯವಾಗಿ ಕಡಿಮೆ ಇರುವುದು ಕಂಡುಬರುತ್ತದೆ. ಆದರೆ ಪರಿಶಿಷ್ಟ ವರ್ಗಗಳ ಒಟ್ಟು ರಾಜ್ಯದ ಸಾಕ್ಷರತೆಯ ಪ್ರಮಾಣಕ್ಕಿಂತ ಮೇದ ಸಮುದಾಯದ ಸಾಕ್ಷರತೆಯು ಪ್ರಮಾಣ ಒಂದು ಪ್ರತಿಶತ ಹೆಚ್ಚಾಗಿರುವುದು ಕಂಡು ಬರುತ್ತದೆ. ಇವರು ಸಾಮಾನ್ಯವಾಗಿ ನಗರ ಪ್ರದೇಶದಲ್ಲಿ ನೆಲೆಸಿದ್ದು, ವಿವಿಧ ಉದ್ಯೋಗ ವ್ಯಾಪಾರಗಳಲ್ಲಿ ತೊಡಗಿರುವುದೇ ಇದಕ್ಕೆ ಕಾರಣವಾಗಿದೆ.

**ಕೋಷ್ಟಕ: ಮೇದರ ಶೈಕ್ಷಣಿಕ ಮಟ್ಟ**

| ಕ್ರ.ಸಂ. | ಶೈಕ್ಷಣಿಕ ಹಂತ | ಒಟ್ಟು ಶೇ | ಮಹಿಳೆಯರು | ಪುರುಷರು |
|---|---|---|---|---|
| ೧. | ಪ್ರಾಥಮಿಕ | ೨೪.೨೧ | ೩೮ | ೪೭ |
| ೨. | ಮಾಧ್ಯಮಿಕ | ೨೦.೫೧ | ೩೬ | ೩೬ |
| ೩. | ಪ್ರೌಢಶಾಲೆ | ೨೭.೬೩ | ೩೭ | ೬೧ |
| ೪. | ಡಿಪ್ಲೋಮಾ | ೦.೫೬ | – | ೨ |
| ೫. | ಪದವಿ ಪೂರ್ವ | ೧೩.೩೯ | ೨೧ | ೨೬ |
| ೬. | ಪದವಿ | ೧೦.೫೪ | ೧೦ | ೨೭ |
| ೭. | ಸ್ನಾತಕೋತ್ತರ ಪದವಿ | ೧.೧೩ | – | ೪ |
| ೮. | ಇತರೆ | ೧.೯೯ | ೩ | ೪ |

ಈ ಸಮುದಾಯ ವ್ಯಾಪಾರ ಉದ್ಯೋಗ ಮಾಡುವುದಕ್ಕಾಗಿ ನಗರಗಳಲ್ಲಿ ನೆಲೆಸಿರುವುದರಿಂದ ಪ್ರೌಢಶಿಕ್ಷಣದ ಮಟ್ಟದಾದರು ಶಿಕ್ಷಣ ಪಡೆಯುತ್ತಾರೆ ಎಂಬುದು ಈ ಮೇಲಿನ ಅಂಶಗಳಿಂದ ತಿಳಿಯುತ್ತದೆ. ಅಲ್ಲದೆ ಈ ಸಮುದಾಯದವರು ತಮ್ಮ ಕುಲಕಸುಬು ಮಾಡುವುದರಿಂದ ಲಾಭಾವಿಲ್ಲ ಎನ್ನುವ ಕಾರಣದಿಂದ ಬೇರೆ ಉದ್ಯೋಗ, ವ್ಯಾಪಾರಗಳನ್ನು ಕೈಗೊಂಡಿರುವುದರಿಂದ ಆದಾಯದಲ್ಲಿ ಹೆಚ್ಚಳವಾಗುತ್ತಿದೆ. ಈ ಕಾರಣದಿಂದ ಶಿಕ್ಷಣ ಮಟ್ಟದಲ್ಲಿ ಹೆಚ್ಚಳವಾಗಿದೆ. ಅಷ್ಟೇ ಅಲ್ಲದೆ ಇಂತಹ ಬೇರೆ ಉದ್ಯೋಗ ಮತ್ತು ವ್ಯಾಪಾರವನ್ನು ಪಡೆಯಲು ಶಿಕ್ಷಣದ ಅವಶ್ಯಕತೆ ಇರುವುದು. ಇವರ ಶೈಕ್ಷಣಿಕ ಮಟ್ಟವು ಸುರಪುರ ಪಟ್ಟಣವನ್ನು ಬಿಟ್ಟು ಉಳಿದೆಡೆ ನೆಲೆಸಿರುವ ಅಂದರೆ ಗ್ರಾಮಗಳಲ್ಲಿ ನೆಲೆಸಿರುವ ಮೇದರಲ್ಲಿ ಶೈಕ್ಷಣಿಕ ಮಟ್ಟವು ಕಡಿಮೆಯಾಗಿರುವುದು. ಈ

ಸಮುದಾಯದಲ್ಲಿ ಪ್ರೌಢ ಹಂತದವರೆಗೆ ಶಿಕ್ಷಣ ಪ್ರಮಾಣ ಅಧಿಕವಾಗಿದೆ. ಉನ್ನತ ಶಿಕ್ಷಣ ಮತ್ತ ತಾಂತ್ರಿಕ ಶಿಕ್ಷಣದ ಮಟ್ಟವು ಇಳಿಮುಖವಾಗಿರುವುದು ಕಂಡುಬರುತ್ತದೆ. ಅಂದರೆ ದುಡಿಯುವ ವಯಸ್ಸಿನವರು ದುಡಿಯುವ ಸಮಯ ಆಳು ಮಾಡಬಾರದು ಎನ್ನುವ ಕಾರಣಕ್ಕೆ ಪ್ರೌಢ ಅಥವಾ ಪದವಿ ಪೂರ್ವ ಹಂತಕ್ಕೆ ಹೆಚ್ಚಾಗಿ ಶಿಕ್ಷಣವನ್ನು ನಿಲ್ಲಿಸುತ್ತಿರುವುದು ಕಂಡು ಬರುತ್ತದೆ. ಉತ್ತಮ ಆರ್ಥಿಕ ಸ್ಥಿತಿಗತಿಯನ್ನು ಹೊಂದಿದ ಕುಟುಂಬದವರು ಮಾತ್ರ ಉನ್ನತ ಶಿಕ್ಷಣವನ್ನು ಮಾಡುತ್ತಿರುವರು ಅಲ್ಲದೆ ಸರ್ಕಾರಿ ಶೈಕ್ಷಣಿಕ ಸೌಲಭ್ಯಗಳು ಸಿಗುವದಕ್ಕಾಗಿ ಉನ್ನತಶಿಕ್ಷಣ ಮುಂದುವರೆಸಿರುವುದು ಕಂಡುಬರುತ್ತದೆ.

ಈ ಎರಡು ಸಮುದಾಯಗಳ ಶೈಕ್ಷಣಿಕ ಮಟ್ಟವನ್ನು ಈ ಮೇಲಿನ ಅಂಕಿ ಅಂಶಗಳಿಂದ ಅವಲೋಕಿಸಿದಾಗ ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡ ಕುಟುಂಬಗಳ ಶಿಕ್ಷಣದ ಮಟ್ಟ ಕಡಿಮೆ ಇರುವದು ಸ್ಪಷ್ಟವಾಗುವುದು. ಇಲ್ಲಿ ಬೇಡ ಸಮುದಾಯದವರು ಕೃಷಿ, ಕೃಷಿಕೂಲಿ ದಿನಗೂಲಿ ಕೆಲಸಗಳಲ್ಲಿ ತೊಡಗಿದ್ದರೆ ಪರಿಣಾಮವಾಗಿ ಇವರ ಶೈಕ್ಷಣಿಕಮಟ್ಟ ಕಡಿಮೆ ಇದೆ ಎಂಬುದು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿದ ಬೇಡ ಕುಟುಂಬಗಳ ಶೈಕ್ಷಣಿಕ ಮಟ್ಟಕ್ಕೂ ಮತ್ತು ಕೃಷಿ ಚಟುವಟಿಕೆಗಳಲ್ಲಿ ತೊಡಗಿದ ಕುಟುಂಬಗಳ ಶೈಕ್ಷಣಿಕ ಮಟ್ಟವನ್ನು ಹೋಲಿಸಿದಾಗ ತಿಳಿಯುತ್ತದೆ. ಅಲ್ಲದೆ ನಗರಪ್ರದೇಶದಲ್ಲಿ ನೆಲೆಸಿರುವ ಬೇಡ ಕುಟುಂಬಗಳ ಶೈಕ್ಷಣಿಕ ಮಟ್ಟ ಮತ್ತು ಗ್ರಾಮಗಳಲ್ಲಿ ನೆಲೆಸಿರುವ ಬೇಡ ಕುಟುಂಬಗಳ ಶೈಕ್ಷಣಿಕ ಮಟ್ಟವನ್ನು ಹೋಲಿಕೆ ಮಾಡಿ ನೋಡಿದಾಗ ಈ ಹೇಳಿಕೆ ಸ್ಪಷ್ಟವಾಗುವುದು. ಅದರಂತೆ ಮೇದ ಸಮುದಾಯದ ತಮ್ಮ ಕುಲಕಸುಬು ಮಾಡುವ ಕುಟುಂಬದ ಶೈಕ್ಷಣಿಕಮಟ್ಟ ಹಾಗೂ ಇತರ ಉದ್ಯೋಗಗಳನ್ನು, ವ್ಯಾಪಾರಗಳಲ್ಲಿ ತೊಡಗಿದ ಕುಟುಂಬಗಳ ಶೈಕ್ಷಣಿಕ ಮಟ್ಟದಿಂದ ಇದು ಸ್ಪಷ್ಟವಾಗುವುದು.

ಮೇದ ಸಮುದಾಯದ ಶೈಕ್ಷಣಿಕ ಮಟ್ಟವು ಬೇಡ ಸಮುದಾಯದ ಶೈಕ್ಷಣಿಕ ಮಟ್ಟಕ್ಕಿಂತ ಹೆಚ್ಚಾಗಿರುವುದು. ಕಾರಣ ಬೇಡ ಸಮುದಾಯದವರು ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡವರ ಸಂಖ್ಯೆ ಹೆಚ್ಚಾಗಿರುವುದಕ್ಕೆ ಶಿಕ್ಷಣಮಟ್ಟ ಕಡಿಮೆ ಇದೆ. ಆದರೆ ಮೇದ ಸಮುದಾಯದವರು ಇಂತಹ ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಗಳಿಂದ ಸ್ಥಿತ್ಯಂತರ ಹೊಂದಿ ಆಧುನಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿರುವವರ ಸಂಖ್ಯೆ ಅಧಿಕವಾಗಿದೆ. ಕಾರಣ ಇವರ ಶೈಕ್ಷಣಿಕ ಮಟ್ಟವು ಅಧಿಕವಾಗಿದೆ. ಆದರೆ ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವವರಲ್ಲಿ ಶೈಕ್ಷಣಿಕಮಟ್ಟ ಕಡಿಮೆಯಾಗಿದೆ. ಇದರಂತೆ ಬೇಡ ಸಮುದಾಯದ

ಸಾಂಪ್ರದಾಯಿಕ ಆರ್ಥಿಕ ಚಟುವಟಿಕೆಗಳಿಂದ ಸ್ಥಿತ್ಯಂತರ ಹೊಂದಿದೆ ಕುಟುಂಬಗಳ ಶಿಕ್ಷಣ ಮಟ್ಟವು ಬದಲಾಗಿದ್ದು ಕಂಡು ಬರುತ್ತದೆ. ಆರ್ಥಿಕ ಸ್ಥಿತಿಗತಿ, ಆರ್ಥಿಕತೆಯ ವಿಧಿ ವಿಧಾನಗಳು ಶೈಕ್ಷಣಿಕ ಸ್ಥಿತಿಗತಿಯನ್ನು ನಿರ್ಧರಿಸುತ್ತವೆ ಎಂಬುದು ಸ್ಪಷ್ಟವಾಗುತ್ತದೆ.

ಅಲ್ಲದೆ ಕುಟುಂಬದ ಸಾಮಾಜಿಕ ಸ್ಥಾನಮಾನ ಮತ್ತು ಅಂತಸ್ತು, ಕುಟುಂಬದ ರಾಜಕೀಯ ಸ್ಥಾನಮಾನ ಮತ್ತು ಅಂತಸ್ತುಗಳು ಸಮುದಾಯಗಳ ಶೈಕ್ಷಣಿಕ ಮಟ್ಟವನ್ನು ನಿರ್ಧರಿಸುತ್ತವೆ. ಬೇಡ ಸಮುದಾಯದಲ್ಲಿ ಗೌಡ, ಕುಲಕರ್ಣಿ, ದೇಸಾಯಿ ಎಂಬ ಮನೆತನಗಳು ಸಮುದಾಯದಲ್ಲಿ ಉನ್ನತ ಸ್ಥಾನಮಾನವನ್ನು ಹೊಂದಿದೆ. ಅದರಂತೆ ರಾಜಕೀಯ ಸ್ಥಾನಮಾನಗಳು ಈ ಕುಟುಂಬಗಳಿಗೆ ದೊರಕಿರುವುದರಿಂದ ಸಮುದಾಯದ ಸಾಮಾನ್ಯ ಜನರ ಶೈಕ್ಷಣಿಕ ಮಟ್ಟಕ್ಕಿಂತ ಈ ಕುಟುಂಬಗಳು ಅಧಿಕ ಶಿಕ್ಷಣ ಮಟ್ಟವನ್ನು ಹೊಂದಿವೆ ಎಂಬುದರಿಂದ ತಿಳಿಯುತ್ತದೆ. ಆದರೂ ಕೂಡ ಇಂದಿನ ದಿನಗಳಲ್ಲಿ ಅಂದರೆ ಜಾಗತೀಕರಣ ಸಂದರ್ಭದಲ್ಲಿ ಆರೋಪಿತ ಅಂತಸ್ತಿಗಿಂತ ಗಳಿಸಿದ ಅಂತಸ್ತು ಮಹತ್ವ ಪಡೆದುಕೊಂಡಿದ್ದರಿಂದ, ವ್ಯಕ್ತಿಯ ವ್ಯಕ್ತಿತ್ವಕ್ಕೆ ಮಹತ್ವ ಬಂದಿದ್ದರಿಂದ, ಎಲ್ಲರು ಶಿಕ್ಷಣ ಪಡೆಯುವ ಅವಕಾಶ ಹೊಂದಿದ್ದರಿಂದ, ಈ ಹೊಲಿಕೆ ಏರುಪೇರಾಗಿದೆ. ಒಟ್ಟಾರೆಯಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳು ಸಹ ಶೈಕ್ಷಣಿಕ ಮಟ್ಟವನ್ನು ನಿರ್ಧರಿಸುತ್ತವೆ ಎಂಬುದು ಸ್ಪಷ್ಟ.

**ಅಡಿಟಿಪ್ಪಣಿಗಳು**

೧. ಸಂ. ವಿಜಯಲಕ್ಷ್ಮೀ ಆರ್. ಹಾಲಕ್ಕಿ ಒಕ್ಕಲಿಗ ಮಹಿಳೆ (ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳ ಅಧ್ಯಯನ) ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ, ೨೦೦೮, ಪುಟ ೯೯.

೨. ಪ್ರಭಾಕರ ಎ.ಎಸ್; ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೧

೩. ವಿಜಯಲಕ್ಷ್ಮೀ ಆರ್. ಹಾಲಕ್ಕಿ ಒಕ್ಕಲಿಗ ಮಹಿಳೆ (ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳ ಅಧ್ಯಯನ) ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ, ೨೦೦೮, ಪುಟ ೯೯.

೪. ಅದೇ, ಪುಟ-೧೦೪.

೫. ಪ್ರಭಾಕರ ಎ.ಎಸ್; ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೬.

೬. ವಿಜಯಲಕ್ಷ್ಮೀ ಆರ್. ಹಾಲಕ್ಕಿ ಒಕ್ಕಲಿಗ ಮಹಿಳೆ (ಸಾಮಾಜಿಕ, ಆರ್ಥಿಕ, ಸ್ಥಿತಿಗತಿಗಳ ಅಧ್ಯಯನ) ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ, ೨೦೦೮, ಪುಟ–೧೩೬

೭. ಅದೇ, ಪುಟ–೧೩೭–೧೩೮.

೮. ಅದೇ, ಪುಟ–೧೭೮.

೯. ರಹಮತ್ ತರೀಕೆರೆ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–೩, 'ಧರ್ಮ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪುಟ–೧೧೫.

೧೦. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪುಟ–೧೫೫

೧೧. ಅದೇ, ಪುಟ–೧೧೫.

೧೨. ಶಂಕರರಾವ್ ಚ.ನ; ಸಮಾಜಶಾಸ್ತ್ರದ ಪರಿಚಯ, ಜೈ ಭಾರತ ಪ್ರಕಾಶನ, ಮಂಗಳೂರು, ೧೯೯೬, ಪುಟ–೧೫೬.

೧೩. ಮೊಗಳ್ಳಿ ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ–೧೦೮.

೧೪. ಪ್ರಭಾಕರ ಎ.ಎಸ್; ಹೆಳವರು, ಶ್ರೀ ದೇವರಾಜ್ ಅರಸು, ಸಂಶೋಧನಾ ಸಂಸ್ಥೆ, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ೨೦೦೬, ಪುಟ–೯೭.

## ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳ ಸಾಂಸ್ಕೃತಿಕ ಸ್ಥಿತ್ಯಂತರ

ಜಾಗತೀಕರಣವೆಂಬುದು ಒಂದು ವಿದ್ಯಮಾನವಾಗಿದ್ದುದ್ದಲ್ಲದೆ ಬಂಡವಾಳಶಾಹಿ ಆಧುನಿಕತೆಯು ಇನ್ನೊಂದು ಹಂತವಾಗಿದ್ದು, ವಿಶ್ವ ಸಮಾಜಗಳನ್ನು ಅತ್ಯಂತ ಹತ್ತಿರದಿಂದ ಕೂಡಿಸುವ ಸಂಕೀರ್ಣವಾದ ಒಂದು ಸ್ಥಿತಿ ಆಗಿದೆ. ಇಂತಹ ಸ್ಥಿತಿಯನ್ನು ಕುರಿತು ಜಗತ್ತಿನಲ್ಲೆಡೆ ಚರ್ಚೆಗಳು ನಡೆಯುತ್ತಿವೆ. "ಇಡೀ ಜಗತ್ತು ಜಾಗತೀಕರಣದ ಕುರಿತು ಯೋಚಿಸುತ್ತಿರುವ ತೀವ್ರತೆಯಿಂದಲೇ ಆದರ ಅನಿವಾರ್ಯತೆ ಮತ್ತು ಅಪಾಯಗಳೆರಡನ್ನೂ ಕಂಡುಕೊಳ್ಳಬಹುದು. ಜಾಗತೀಕರಣ ಚರ್ಚೆ ಹೆಚ್ಚು ತೀವ್ರವಾಗಿರುವುದು ಭಾರತದಂತಹ ಅನೇಕ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ, ಒಂದೆಡೆ ಇಂತಹ ದೇಶಗಳು ವಸಾಹತುಶಾಹಿಯು ಜಾಗತೀಕರಣದ ಹೆಸರಲ್ಲಿ ನಡೆಸಲಿರುವ ಮರು ಆಕ್ರಮಣದ ಕುರಿತು ಆತಂಕಗೊಂಡಿದ್ದರೆ, ಜಾಗತೀಕರಣದ ಫಲವಾಗಿ ಹುಟ್ಟಿರುವ ಉದಾರೀಕರಣ ಮತ್ತು ಖಾಸಗೀಕರಣಗಳಿಂದ ಜಾಗತೀಕ ಮಟ್ಟದ ತಂತ್ರಜ್ಞಾನದ ಪ್ರವಾಹದಲ್ಲಿ ಒಂದಾಗಿ ಅಭಿವೃದ್ಧಿ ಸಾಧಿಸುವ ತವಕವು ಹೆಚ್ಚುತ್ತಿದೆ. ಒಂದು ಅರ್ಥದಲ್ಲಿ ಜಾಗತೀಕರಣ ಅಪಾಯ ಮತ್ತು ಅವಕಾಶಗಳೆರಡನ್ನು ಇಂದು ಜಗತ್ತಿನ ಮುಂದಿಟ್ಟಿದೆ."[1]

ಜಾಗತೀಕರಣವೆಂದರೆ "ವಿಶ್ವ ಆರ್ಥಿಕ ಸಂಬಂಧಗಳು, ವಿಶ್ವ ರಾಜಕೀಯ, ಸಂಪರ್ಕದಿಂದ ಹಳೆಯ ಜಗತ್ತಿನ ಹಿಂದುಳಿದ ಸಮುದಾಯಗಳ ಜೊತೆಗೆ ರೂಪಿಸಿಕೊಳ್ಳುತ್ತಿರುವ ಆಧುನಿಕ ಸಾಂಸ್ಕೃತಿಕ ರೂಪಾಂತರಗಳ ವಿಕಾಸವಾಗಿದೆ. ಹೊಸ ಜಗತ್ತಿನ ತಂತ್ರಜ್ಞಾನ ವಿಜ್ಞಾನ ಕುಶಲತೆ ಹಾಗೂ ಬೌದ್ಧಿಕ ಸಂಯೋಗ ಕ್ರಿಯೆಗಳನ್ನು ವಿಕೇಂದ್ರೀಕರಣಗೊಳಿಸುವ ಹಂತವಾಗಿ ಜಾಗತೀಕರಣ ತೃತೀಯ ಜಗತ್ತಿನಲ್ಲಿ ನಾಗರೀಕ ಸವಾಲುಗಳನ್ನು ಮುಖಾಮುಖಿಯಾಗಿಸುವುದಾಗಿದೆ"[2] ಅಂದರೆ ಸಮಾಜದಲ್ಲಿ ಜನರ ಜೀವನದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಇತ್ಯಾದಿ ಕ್ಷೇತ್ರಗಳು, ಸಾಮ್ರಾಜ್ಯಶಾಹಿ ಪ್ರಭಾವಕ್ಕೆ ಒಳಗಾಗುವುದಾಗಿದೆ. ಇದರ ಪರಿಣಾಮವಾಗಿ ಸಾಮಾಜಿಕ ಪರಿವರ್ತನೆಗಳು ಮತ್ತು ಸಾಂಸ್ಕೃತಿಕ ರೂಪಾಂತರಗಳು ಉಂಟಾದವು. ಸಾಂಸ್ಕೃತಿಕ ರೂಪಾಂತರವೆಂದರೆ, ವೈಚಾರಿಕವಾಗಿ ಎಚ್ಚರಗೊಳ್ಳುತ್ತಲೇ ತನ್ನ ಸಾಂಸ್ಕೃತಿಕ ಸಂಪತ್ತನ್ನು ತಲೆಮಾರುಗಳ ಜ್ಞಾನದ ಕ್ರಮಗಳನ್ನೂ ಆಧುನಿಕತೆಯ ಜೊತೆಗೆ ಸಮೀಕರಿಸಿ, ಪರಿಶೀಲಿಸಿ ಸಂಯೋಗಿಸಿ ತನ್ನ ಸಮುದಾಯದ ಹಿತಕ್ಕೆ ತಕ್ಕಂತೆ. ವಿಕಾಸವಾಗುವುದನ್ನು ಸಾಂಸ್ಕೃತಿಕ

ರೂಪಾಂತರವೆಂದು ಕರೆದುಕೊಳ್ಳಬಹುದು. ಇಂತಹ ಸಾಂಸ್ಕೃತಿಕ ರೂಪಾಂತರ ಜಾಗತೀಕರಣದ ಪ್ರಭಾವದಿಂದ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಈ ರಾಷ್ಟ್ರಗಳ ತಳಸಮುದಾಯಗಳು, ಬುಡಕಟ್ಟುಗಳು, ಇಂತಹ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಮ್ಮಿಂದ ಒಮ್ಮೆಲೆ ಒಳಗಾಗುವುದಿಲ್ಲ. ಕಾಲದ ಏರಿಳಿತಗಳಿಗೆ ಹೊಂದಾಣಿಕೆಯಾಗುವುದಕ್ಕಾಗಿ ಅಥವಾ ಕಾಲದ ಒತ್ತಡದಿಂದ ಸ್ಥಿತ್ಯಂತರಕ್ಕೆ ಒಳಗಾಗುತ್ತವೆ. ಹೀಗೆ "ವಿಕಾಸಮುಖಿ ಸಾಂಸ್ಕೃತಿಕ ಕೋಶ ಬದಲಾವಣೆಯ ಎಲ್ಲಾ ಬಗೆಯ ಏರಿಳಿತಗಳನ್ನು ಕೈಚೆಲ್ಲಿ ಅಥವಾ ಅಸಹಾಯಕ ದೈನ್ಯ ಸ್ಥಿತಿಯಿಂದಲೇ ಸ್ವೀಕರಿಸುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ. ಸ್ವೀಕರಣ ಮತ್ತು ಪ್ರತಿರೋಧಗಳು ಏಕಕಾಲದಲ್ಲಿ ಆ ಕೋಶದ ಒಳಗೆ ಸನ್ನದ್ಧವಾಗಿರುತ್ತವೆ. ಹೀಗೆ ಸ್ಥಿತ್ಯಂತರಕ್ಕೆ ಭಾರತದ ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸಂವೇದಿಸಿದ್ದು, ಗಮನಾರ್ಹ ಸಂಗತಿ ಈ ಸ್ವಿಕರಣ ಮತ್ತು ಪ್ರತಿರೋಧಗಳು ಸಮುದಾಯಗಳನ್ನು, ಬದಲಾವಣೆಗೆ ಅರ್ಥಪೂರ್ಣವಾಗಿ ಅನ್ವಯಿಸುವ, ಬೆಸೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ."[೨] ಜಾಗತೀಕರಣ ವೆಂಬ ಮಹಾಪ್ರವಾಹಕ್ಕೆ ಎಲ್ಲಾವು ಕೊಚ್ಚಿಕೊಂಡು ಹೋಗುವ ಸಾಧ್ಯತೆಗಳೇ ಹೆಚ್ಚು ಬುಡಕಟ್ಟುಗಳು ತಮ್ಮದೆಯಾದ ವಿಶಿಷ್ಟ ಆಚರಣೆ, ಪದ್ಧತಿ. ಸಂಪ್ರದಾಯ, ಆಚಾರ, ವಿಚಾರ ಇತ್ಯಾದಿ ವಿಶಿಷ್ಟತೆಗಳನ್ನು ಹೊಂದಿದೆ. ಇಂತಹ ವಿಶಿಷ್ಟತೆಯನ್ನು ಕಾಪಾಡಲು, ಬುಡಕಟ್ಟುಗಳು ಜಾಗತೀಕರಣದ ಪ್ರವಾಹವನ್ನು ತಡೆಯುಲು ಶತ ಪ್ರಯತ್ನ ಮಾಡುತ್ತವೆ. ಈ ಪ್ರವಾಹದ ರಭಸಕ್ಕೆ ಈ ಪ್ರಯತ್ನವು ಕೂಡ ಕೊಚ್ಚಿ ಹೋಗುತ್ತದೆ. ಅಂದರೆ ಪ್ರತಿರೋಧವು ಕೂಡ ಕೊನೆಯಲ್ಲಿ ಐಕ್ಯವಾಗುತ್ತವೆ. ಈ ಪ್ರವಾಹವು ಎಲ್ಲವನ್ನು ನೆಲಸಮ ಮಾಡುವುದರಿಂದ ಸಮತಟ್ಟಾಗುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ. ಇದರ ಪರಿಣಾಮವಾಗಿ ಏರಿಳಿತಗಳು ಉಂಟಾಗುತ್ತವೆ. ಅಂದರೆ ಭಾರತದ ಮೆಲಜಾತಿ ಉನ್ನತ ವರ್ಗಗಳು, ಹೀಗಾಗಲೇ ಜಾಗತೀಕರಣದ ಸುಂದರವಾದ ಆಸನಗಳನ್ನು ಅಲಂಕರಿಸಿವೆ. ಆದರೆ ಬುಡಕಟ್ಟುಗಳು ಈ ಆಸನಗಳನ್ನು ಇನ್ನೂ ನೋಡಿಲ್ಲ, ಈ ಆಸನಗಳನ್ನು ನೋಡಲು ಮತ್ತು ಪಡೆಯಲು ನಿರಂತರ ಕಷ್ಟಪಡಬೇಕಾದ ಹಾಗೂ ಕಠಿಣ ಪರಿಶ್ರಮದ ಅಗತ್ಯವಿದೆ. ಇಷ್ಟರಲ್ಲೇ ಮೇಲ್ಜಾತಿ, ಉನ್ನತವರ್ಗಗಳು ಮುಂಚೂಣಿಯ ಆಸನಗಳನ್ನು ಅಲಂಕರಿಸಿರುತ್ತವೆ. ಆಂದರೆ ಜಾಗತೀಕರಣವು ಅವಕಾಶಗಳನ್ನು ನೀಡುವಲ್ಲಿ ತಾರತಮ್ಯವನ್ನು ಅಂತರ್ಗತ ಮಾಡಿಕೊಂಡಿರುತ್ತದೆ ಎಂಬುದು ಸ್ಪಷ್ಟವಾಗುವುದು. ಪಾಶ್ಚಿಮತ್ಯರ ಆಳ್ವಿಕೆಯಿಂದ ಭಾರತದ ಕೆಳಜಾತಿಗಳು ಮತ್ತು ಬುಡಕಟ್ಟುಗಳಲ್ಲಿ ಬದಲಾವಣೆಯನ್ನು ತಂದವು. ಪಾಶ್ಚಿಮಾತ್ಯರ ಕೈಗಾರೀಕರಣ, ಅದರ ಫಲವಾದ ಆಧುನೀಕರಣ, ಇಂಗ್ಲೀಷ್ ಶಿಕ್ಷಣ, ಸುಧಾರಣಾವಾದ ಇವೆಲ್ಲವು ಈ ಸಮುದಾಯಗಳಲ್ಲಿ ಬದಲಾವಣೆ ತರುವುದಕ್ಕೆ ಕಾರಣವಾಗಿವೆ. ಇವೆಲ್ಲವು ವಸಾಹತುಶಾಹಿ ಆಳ್ವಿಕೆಗೆ ಪೂರಕವಾಗಿದ್ದವು, ಹೊರತು ಬುಡಕಟ್ಟುಗಳ ಮತ್ತು ಕೆಳಜಾತಿಗಳ

ಸುಧಾರಣೆಗಾಗಿ ಬಂದವುಗಳಾಗಿರಲಿಲ್ಲ ಇದರಂತೆ ಜಾಗತೀಕರಣದ ಫಲವಾದ ಉದಾರೀಕರಣ, ಖಾಸಗೀಕರಣ ತೀವ್ರ ಕೈಗಾರಿಕೀಕರಣ, ತಂತ್ರಜ್ಞಾನ, ವಿಜ್ಞಾನಗಳು, ಇತ್ಯಾದಿಗಳು ಭಾರತದಂತಹ ತೃತೀಯ ಜಗತ್ತಿನ ದೇಶಗಳ ಕೆಳಜಾತಿಗಳ, ಬುಡಕಟ್ಟುಗಳ ದೃಷ್ಟಿಯಿಂದ ಹುಟ್ಟಿಕೊಂಡಿಲ್ಲ. ಆದರೆ ಸಾಮ್ರಾಜ್ಯಾಶಾಹಿ ಆಳ್ವಿಕೆಗೆ ಪೂರಕವಾದ ತಂತ್ರಗಳಾಗಿವೆ. ಭಾರತದ ಬುಡಕಟ್ಟುಗಳು ಇಂತಹ ಸಾಮ್ರಾಜ್ಯಶಾಹಿ ಆಳ್ವಿಕೆಯ ತಂತ್ರಗಳಿಗೆ ಒಳಗಾಗಬೇಕಾದ ಅನಿವಾರ್ಯತೆಯುಂಟಾಗಿರುತ್ತದೆ. ಇದರ ಪರಿಣಾಮವಾಗಿ ಸ್ಥಿತ್ಯಂತರಕ್ಕೆ ಒಳಗಾಗುತ್ತವೆ.

ಸುರಪೂರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟುಗಳು ಸಾಮ್ರಾಜ್ಯಶಾಹಿಯ ತಂತ್ರಗಳಿಗೆ ಒಳಗಾಗಬೇಕಾದ ಅನಿವಾರ್ಯತೆಯಿಂದ ಸ್ಥಿತ್ಯಂತರಕ್ಕೆ ಒಳಗಾಗಿವೆ. ಇವುಗಳು ಈಗಾಗಲೇ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಸ್ಥಿತ್ಯಂತರ ಸ್ವರೂಪ ಹೇಗಿದೆ. ಈ ಸಮುದಾಯಗಳ ಸ್ಥಿತ್ಯಂತರಕ್ಕೆ ಕಾರಣಗಳೇನು? ಸ್ಥಿತ್ಯಂತರದ ಪರಿಣಾಮಗೇಳೇನು? ಎಂಬುದು ನಮ್ಮ ಮುಂದಿರುವ ಪ್ರಶ್ನೆಗಳಾಗಿವೆ.

ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಬುಡಕಟ್ಟುಗಳು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗಿವೆ. ಈ ಬದಲಾವಣೆಯು ಯಾವುದೇ ಪ್ರತಿಭಟನೆ ಇಲ್ಲದೆ ಸರಳವಾಗಿ ಒಪ್ಪಿಕೊಳ್ಳುತ್ತಿಲ್ಲ ರಾಜಕೀಯ ಆರ್ಥಿಕ ಕ್ಷೇತ್ರಗಳನ್ನು ಹೊರತುಪಡಿಸಿ ಉಳಿದಂತೆ ಬದಲಾವಣೆಗೆ ವಿರೋಧಿ ಕೂಗುಗಳು ವ್ಯಾಪಕವಾಗಿವೆ. ಆರ್ಥಿಕ ಮತ್ತು ರಾಜಕೀಯ ಕ್ಷೇತಗಳಲ್ಲಿಯ ಬದಲಾವಣೆಯು ಒಟ್ಟಾರೆ ಸಾಮಾಜಿಕ ವ್ಯವಸ್ಥೆಯಲ್ಲಿಯ ಬದಲಾವಣೆಯನ್ನು ನಿರ್ಧರಿಸುತ್ತವೆ. ಕಾರಣ ಪ್ರತಿಭಟನೆಯ ಇದ್ದರೂ ಸಹ ಬದಲಾವಣೆ ಸ್ಥಗಿತವಾಗದೆ ಹಾಗೆಯೇ ಮುಂದುವರೆಯುತ್ತವೆ. ಪರಿಣಾಮವಾಗಿ ಸಾಮಾಜಿಕ ವ್ಯವಸ್ಥೆ ಸ್ಥಿತ್ಯಂತರಕ್ಕೆ ಒಳಗಾಯಿತು. ಸ್ಥಿತ್ಯಂತರಕ್ಕೆ ಒಳಪಟ್ಟಿರುವುದರಿಂದ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಕೂಡ ಇದರಿಂದ ದೂರ ಉಳಿಯಲು ಸಾಧ್ಯವಿಲ್ಲ. ಕಾರಣ ವ್ಯವಸ್ಥೆಯ ಒಂದು ಭಾಗದಲ್ಲಿ ಏರಿಳಿತಗಳು ಉಂಟಾದರೆ ಇಡೀ ವ್ಯವಸ್ಥೆಯೇ ಏರಿಳಿತವಾಗುವುದು.

ಸಾಮ್ರಾಜ್ಯಶಾಹಿಯು ಜಾಗತೀಕರಣದ ಮೂಲಕ ಆಧುನಿಕ ಬಂಡವಾಳಶಾಹಿಯ ಹಿತಾಸಕ್ತಿಯನ್ನು ಕಾಪಾಡುವುದಾಗಿದೆ. ಇದರ ಪರಿಣಾಮವಾಗಿ ತೃತೀಯ ಜಗತ್ತಿನ ರಾಷ್ಟ್ರಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಕೊಳ್ಳೆಹೊಡೆಯುವುದೇ ಆಗಿದೆ. ಸಾಮ್ರಾಜ್ಯಶಾಹಿ ಸೃಷ್ಟಿಸಿದ ಜಾಗತೀಕರಣದ ಜಾಲದಿಂದ ತೃತೀಯ ಜಗತ್ತಿನ ರಾಷ್ಟ್ರಗಳು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

ಜಾಗತೀಕರಣವು "ಖಾಸಗೀ ಕರಣದ" ಮೂಲಕ ತೃತೀಯ ಜಗತ್ತಿನ ರಾಷ್ಟ್ರಗಳ ಸರ್ಕಾರಗಳನ್ನು ಒಟ್ಟು ಆಡಳಿತ ವ್ಯವಸ್ಥೆಯಿಂದ ದೂರಮಾಡಿ, ಆಡಳಿತ ಕ್ಷೇತ್ರದ ಮಹತ್ವದ

ಭಾಗಗಳನ್ನು ಖಸಗೀಕರಣಗೊಳಿಸುವ ಮೂಲಕ ತನ್ನ ವಶಕ್ಕೆ ತೆಗೆದುಕೊಳ್ಳುವುದು. ಅಂದರೆ ದೇಶದ ಒಟ್ಟು ಆರ್ಥಿಕ ಸಂಪನ್ಮೂಲದ ಕ್ರೋಡೀಕರಣದಲ್ಲಿ ಮಹತ್ವದ ಪಾತ್ರವಹಿಸುವ ವಿವಿಧ ಕ್ಷೇತ್ರಗಳನ್ನು ಖಾಸಗೀಕರಣದ ಹೆಸರಲ್ಲಿ ತನ್ನ ಹಿಡಿತಕ್ಕೆ ತಂದುಕೊಂಡು, ಆಧೀನ ರಾಷ್ಟ್ರಗಳ ಮೇಲೆ ಏಕಸ್ವಾಮ್ಯವನ್ನು ಸಾಧಿಸುವುದು, ಆಗ ಈ ರಾಷ್ಟ್ರಗಳ ಸರಕಾರಗಳು ಸಹಜವಾಗಿ ಮಹತ್ವದ ಆರ್ಥಿಕ ಕ್ಷೇತ್ರಗಳ ಮೇಲೆ ಹಿಡಿತ ಕಳೆದುಕೊಳ್ಳುವುದಷ್ಟೇ ಅಲ್ಲದೇ ದೇಶದ ಒಟ್ಟು ಆರ್ಥಿಕ ವ್ಯವಸ್ಥೆಯ ಚಲನಗಳನ್ನು ಹೊರಗಿನ ರಾಷ್ಟ್ರವೊಂದಕ್ಕೆ ನಿರ್ದೇಶಿಸಲು ಬಿಟ್ಟುಕೊಡುವುದು. ಇದು ಖಾಸಗೀಕರಣದ ನೇರ ಪರಿಣಾಮವಾಗಿದೆ"[೪] ಹೊರಗಿನ ರಾಷ್ಟ್ರಗಳಿಂದ ನಿರ್ದೇಶಿಸಲ್ಪಡುವ ಆರ್ಥಿಕ ವ್ಯವಸ್ಥೆಯು ಆಧುನಿಕ ಬಂಡವಾಳಶಾಹಿ ಹಿತಾಸಕ್ತಿಯನ್ನು ಹೊಂದಿರುತ್ತದೆ. ಬಂಡವಾಳಶಾಹಿಗಳು ತಮಗೆ ಅನುಕೂಲವಾಗುವ ರೀತಿಯಲ್ಲಿ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಆರ್ಥಿಕ ನೀತಿಯನ್ನು ಆರ್ಥಿಕಯೋಜನೆಗಳನ್ನು ರೂಪಿಸುತ್ತವೆ. ಕಾರಣ ಈ ಯೋಜನೆಗಳು, ತೃತೀಯ ಜಗತ್ತಿನ ಸಾಮಾಜಿಕ ವ್ಯವಸ್ಥೆಯನ್ನು ಅರಿಯದೆ ರೂಪಿಸಿದವುಗಳಾಗಿವೆ. ಆದ್ದರಿಂದ ಇವುಗಳು ಈ ರಾಷ್ಟ್ರಗಳ ಬುಡಕಟ್ಟು ಸಮುದಾಯಗಳು ಮತ್ತು ತಳಸಮುದಾಯಗಳ ಮೇಲೆ ಪರಿಣಾಮಬೀರುತ್ತವೆ.

"ಸಾಮ್ರಾಜ್ಯಶಾಹಿಯು ತಾನು ಉತ್ಪಾದಿಸಿದ ಸರಕುಗಳನ್ನು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಯಥೇಚ್ಚವಾಗಿ ಹರಡಲು ಉದಾರೀಕರಣ ನೀತಿಯನ್ನು ಕಲ್ಪಸಲಾಗಿದೆ. ಉದಾರೀಕೃತ ಮಾರುಕಟ್ಟೆ, ಶ್ರೀಮಂತ ದೇಶಗಳ ಮಿಗಿತ ಸರಕುಗಳ ಮಾರಾಟಕ್ಕೆ, ತೃತೀಯ ಜಗತ್ತನ್ನು ವ್ಯಾಪಾರಿ ಜಗತ್ತಿನ ಒಟ್ಟು ಮಾರುಕಟ್ಟೆಯ ನೀತಿಯನ್ನು ತಾನೇ ರೂಪಿಸುವ, ನಿಯಂತ್ರಿಸುವ ಅಧಿಕಾರವನ್ನು ಸಾಮ್ರಾಜ್ಯಶಾಹಿ ಪಡೆದುಕೊಳ್ಳುತ್ತಿದೆ."[೫]

ಹೀಗೆ ಸಾಮ್ರಾಜ್ಯಶಾಹಿ ರೂಪಿತ ಮಾರುಕಟ್ಟೆ ನೀತಿಗಳಿಂದ ಮತ್ತು ಮಾರುಕಟ್ಟೆ ನಿಯಂತ್ರಣದಿಂದ ಈ ಮಾರುಕಟ್ಟೆಯು ವಸ್ತುಗಳ ಬೇಡಿಕೆ ಮತ್ತು ಪೂರೈಕೆ, ವಸ್ತುಗಳ ಗುಣಮಟ್ಟ, ವಸ್ತುಗಳ ಬೆಲೆ ಇತ್ಯಾದಿಗಳು ಆಯಾ ದೇಶಗಳ ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರುತ್ತವೆ. ಇಂತಹ ಸಾಮಾಜಿಕ ವ್ಯವಸ್ಥೆಯ ಭಾಗವಾದ ಬುಡಕಟ್ಟುಗಳು ಸಹ ಪ್ರಭಾವಕ್ಕೊಳಗಾಗುತ್ತವೆ. ಇದರಿಂದ ಬುಡಕಟ್ಟುಗಳು ತಮ್ಮ ಕುಲಕಸುಬಿನಿಂದ ಉತ್ಪಾದಿಸಿದ ವಸ್ತುಗಳು ಆಧುನಿಕ ಕಾರ್ಖಾನೆಯಿಂದ ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಸಾಧ್ಯವಾಗುವುದಿಲ್ಲ. ಕಾರಣ ಕುಲಕಸಬುಗಳು ಅವನತಿಯ ಹಾದಿ ಹಿಡಿದಿವೆ ಇದರಿಂದ ಹೊಸ ದುಡಿಮೆಗಳಲ್ಲಿ ತೊಡಗಬೇಕಾದ ಅನಿವಾರ್ಯ ಉಂಟಾಗುತ್ತದೆ. ಪರಿಣಾಮವಾಗಿ ಆರ್ಥಿಕ ವ್ಯವಸ್ಥೆ ಏರುಪೇರಾಗವುದರಿಂದ ಸಾಮಾಜಿಕ ಬದುಕು ಸಹ ಏರುಪೇರಾಗುವುದು.

"ವಿಶ್ವಬ್ಯಾಂಕ್ WTO, IMF ಮುಂತಾದ ಜಾಗತೀಕ ಸಂಸ್ಥೆಗಳು ಈ ತೃತೀಯ ಜಗತ್ತಿನ ರಾಷ್ಟ್ರಗಳಿಗೆ ಕೇಳಿದಾಗೆಲ್ಲ ಸಾಲ ಕೊಡುತ್ತಿವೆ. ಅವು ಈ ದೇಶದ ಅಭಿವೃದ್ಧಿಯ ನೆಪಗಳನ್ನು ಮುಂದೂಡುತ್ತಿವೆ. ವಿಶ್ವಬ್ಯಾಂಕ್ ತಾನು ಹೂಡುವ ಬಂಡವಾಳವನ್ನು, ಯಾವ ಕ್ಷೇತ್ರದ ಮೇಲೆ ಹೂಡಬೇಕೆಂದು ತೃತೀಯ ಜಗತ್ತಿನ ದೇಶಗಳಿಗೆ ನಿರ್ದೇಶನ ಕೊಡುತ್ತಲೆ ಇರುತ್ತದೆ. ಇದರಿಂದ ತೃತೀಯ ಜಗತ್ತಿನ ದೇಶಗಳನ್ನು ತನ್ನ ಹಂಗಿನ ಚೌಕಟ್ಟಿನೊಳಗೆ ಸಿಕ್ಕಿಸಿಕೊಂಡು ಅಪ್ರತ್ಯಕ್ಷವಾಗಿ ಆ ದೇಶಗಳ ಆರ್ಥಿಕ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳುವುದು ಸಾಮ್ರಾಜ್ಯಶಾಹಿ ಉದ್ದೇಶವಾಗಿದೆ. ಮುಖ್ಯವಾಗಿ ಜಾಗತೀಕರಣ ಪ್ರಕ್ರಿಯೆಯಿಂದ, ಇಡೀ ವಿಶ್ವವೇ ಏಕಾದಿಪತ್ಯದ ಕೆಳಗೆ ತರುವುದು ಸಾಮ್ರಾಜ್ಯಶಾಹಿಗಳ ಉದ್ದೇಶವಾಗಿದೆ" ಈ ಉದ್ದೇಶಕ್ಕನುಸಾರವಾಗಿಯೇ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಯೋಜನೆಗಳು, ಕಾರ್ಯಕ್ರಮಗಳು, ಕಾನೂನುಗಳು, ಶಾಸನಗಳು ಜಾರಿಗೆ ಬರುತ್ತವೆ. ಇವುಗಳು ಆ ದೇಶದಲ್ಲಿರುವ ಸ್ಥಿತಿಯನ್ನು ಅನುಸರಿಸಿ ಬಂದುವುಗಳಲ್ಲ. ಈ ರಾಷ್ಟ್ರಗಳು ಸಾಮ್ರಾಜ್ಯಶಾಹಿಯ ಕೈಗೊಂಬೆಗಳಾಗಿರುವುದರಿಂದ ದೇಶದ ಜನರ ಹಿತಾಸಕ್ತಿಗಿಂತ ಸಾಮ್ರಾಜ್ಯಶಾಹಿ ಹಿತಾಸಕ್ತಿಯೇ ಮುಖ್ಯವಾಗಿರುತ್ತದೆ. ಆದ್ದರಿಂದ ಈ ರಾಷ್ಟ್ರಗಳ ಯೋಜನೆಗಳು ತಮ್ಮ ರಾಷ್ಟ್ರದ ತಳ ಸಮುದಾಯಗಳಿಗೆ, ಬುಡಕಟ್ಟು ಸಮುದಾಯಗಳಿಗೆ ಸಮಸ್ಯೆಗಳನ್ನು ಮತ್ತು ಸವಾಲುಗಳನ್ನು ದೇಶದ ಅಭಿವೃದ್ಧಿಯ ನೆಪದಲ್ಲಿ ತಂದೊಡ್ಡುತ್ತವೆ.

ಜಾಗತೀಕರಣ ಪರಿಣಾಮವಾಗಿ ಅನೇಕ ಬಹುರಾಷ್ಟ್ರೀಯ ಕಂಪನಿಗಳು ಭಾರತ ದೇಶದಲ್ಲಿ ತಲೆಯುತ್ತುತ್ತಿರುವುದರಿಂದ ಬುಡಕಟ್ಟು ಸಮುದಾಯಗಳು ತಮ್ಮ ಹೊಟ್ಟೆಪಾಡಿಗಾಗಿ ತಮ್ಮ ಮೂಲವೃತ್ತಿಗಳನ್ನು ತೊರೆದು ಇಂತಹ ಕಂಪನಿಗಳನ್ನು ಆಶ್ರಯಿಸುತ್ತಿದ್ದಾರೆ. ಈ ಕಂಪನಿಗಳಲ್ಲಿ ಈ ಸಮುದಾಯಗಳಿಗೆ ಉನ್ನತ ಮತ್ತು ಆದಾಯ ಬರುವ ಹುದ್ದೆಗಳು ಪಡೆಯಲು ಸಾಧ್ಯವಾಗುವುದಿಲ್ಲ, ಕೆಳವರ್ಗದ ನೌಕರಿಗಳನ್ನು ಪಡೆಯುವರು. ಕಂಪನಿಗಳ ಪರಿಣಾಮದಿಂದಾಗಿಯೇ ಕುಲಕಸುಬುಗಳು ಮಾಯವಾಗಿವೆ. ಕಾರಣ ಬುಡಕಟ್ಟುಗಳು ಈ ಕಂಪನಿಗಳಲ್ಲಿ ದುಡಿಯುವ ಅನಿವಾರ್ಯತೆ ಉಂಟಾಗುವುದು. ಪರಿಣಾಮವಾಗಿ ಕಡಿಮೆ ವೇತನದಲ್ಲಿ ಹೆಚ್ಚಿನ ಶ್ರಮವನ್ನು ಈ ಬುಡಕಟ್ಟಿನ ಜನರಿಂದ ಪಡೆಯುವ ಮೂಲಕ ಕಂಪನಿಗಳು ಇವರನ್ನು ಶೋಷಣೆಗೆ ಒಳಪಡಿಸುತ್ತಿವೆ. ಹೀಗೆ ಉತ್ಪಾದನೆಯ ಮೂಲ ಬದಲಾದಂತೆಯೇ ಇಡೀ ಸಮಾಜ, ಸಂಸ್ಕೃತಿಯು ಬದಲಾಗುತ್ತದೆ.

ವಿಜ್ಞಾನ ಮತ್ತು ತಂತ್ರಜ್ಞಾನ ಇವು ಇಂದು ಜಗತ್ತನೇ ಆಳುವ ಎರಡು ಬಹುದೊಡ್ಡ ಪರಿಕಲ್ಪನೆಗಳು, ವೈಜ್ಞಾನಿಕ ಮನೋಧರ್ಮ, ಆಧುನಿಕತೆಗೆ ಪ್ರಗತಿಪರನಿಗೆ ಅತ್ಯವಶ್ಯಕ. ಆದರೆ

ಇಂದು ವಿಜ್ಞಾನವು ವಿರಾಟರೂಪ ಪಡೆದುಕೊಂಡಿದೆ. ಆದರೂ ಸಹ ವಿಜ್ಞಾನ ಮಾನವನ ಚರಿತ್ರೆಯನ್ನು ರೂಪಿಸುವಲ್ಲಿ ಮಹತ್ತರ ಪಾತ್ರವಹಿಸಿದೆ. ಅಷ್ಟೇ ಅಲ್ಲದೇ ಈ ಜಗತ್ತನ್ನ ಒಂದು ಅರ್ಥದಲ್ಲಿ ತೀವ್ರವಾಗಿ ಪ್ರೀತಿಸುವಂತೆ ಮತ್ತು ಬಯಸಿದೆ ಸುಖ ತಟಕ್ಕನೆ ಸಿಗುವಂತೆ ಮಾಡಿದ್ದು ವಿಜ್ಞಾನ. ಇದರ ಪ್ರತಿಫಲವಾದ ತಂತ್ರ ಜ್ಞಾನವು ಯಂತ್ರ ಮತ್ತು ತಾಂತ್ರಿಕ ವಿಧಾನಗಳು ಸುವ್ಯವಸ್ಥಿತವಾದ ಜ್ಞಾನದ ಮೂಲಕ ಪ್ರಕೃತಿಯಲ್ಲಿ ಅಡಗಿರುವ ರಹಸ್ಯಗಳನ್ನು ಸಂಶೋಧಿಸುತ್ತವೆ. ಈ ಸಂಶೋಧನೆಗಳ ಜ್ಞಾನವನ್ನು ಮಾನವನ ಹಿತಕ್ಕಾಗಿ ಮತ್ತು ಸಮಾಜದ ಕಲ್ಯಾಣಕ್ಕಾಗಿ ಬಳಸುವುದೇ ತಂತ್ರಜ್ಞಾನದ ಗುರಿಯಾಗಿರುವುದು. ಪರಿಣಾಮವಾಗಿ ಮಾನವನ ಬದುಕು ಬದಲಾವಣೆಯ ಕಡೆ ಮುಖ ಮಾಡುವುದು. ವಿಜ್ಞಾನ ಮತ್ತು ತಂತ್ರಜ್ಞಾನಗಳು ಸಾಮ್ರಾಜ್ಯಶಾಹಿಯ ಒಡಲಿನಿಂದ ಹುಟ್ಟಿ ಬಂದುವುಗಳಾಗಿರುವುದರಿಂದ ಇವುಗಳ ಮೂಲಕ ತೃತೀಯ ಜಗತ್ತಿನ ರಾಷ್ಟ್ರಗಳನ್ನು ಹಿಡಿತದಲ್ಲಿಟ್ಟುಕೊಳ್ಳುತ್ತದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮ ಈ ರಾಷ್ಟ್ರಗಳು ಬದಲಾವಣೆಯ ಪ್ರಕ್ರಿಯೆಗೆ ಒಳಗಾಗುವಂತೆ ಮಾಡುತ್ತದೆ. ಅದರಲ್ಲೂ ಬುಡಕಟ್ಟು ಸಾಮಾಜಿಕ ವ್ಯವಸ್ಥೆ ಮತ್ತು ಸಂಸ್ಕೃತಿ ಸ್ಥಿತ್ಯಂತರಕ್ಕೆ ಒಳಪಡಿಸುವುದು.

ವಿಜ್ಞಾನ ಮತ್ತು ತಂತ್ರಜ್ಞಾನ ಪ್ರತಿಫಲಗಳಾದ ಮಾಹಿತಿ ತಂತ್ರಜ್ಞಾನ ಮತ್ತು ಸಮೂಹ ಮಾಧ್ಯಮಗಳು ಸಾರಿಗೆ ವ್ಯವಸ್ಥೆ ಜಗತ್ತಿನ ಮೂಲೆ ಮೂಲೆಯನ್ನು ಮಾಹಿತಿ ಸಂಪರ್ಕದ ಮೂಲಕ ಸಮೀಪಿಸುತ್ತಿದೆ. ಇದರಿಂದ ಸಂಸ್ಕೃತಿಗಳು ಸಂಗಮಿಸುತ್ತವೆ. ಇದರಿಂದ ಸಂಸ್ಕೃತಿಗಳ ಕೊಡುಕೊಳ್ಳುವಿಕೆ ಪ್ರಾರಂಭವಾಗುವುದು. ಇದರಿಂದ ಆಧುನಿಕ ಸಮಾಜ, ಮುಖ್ಯವಾಹಿನಿ ಸಮಾಜದ ಸಂಸ್ಕೃತಿಯು ಬುಡಕಟ್ಟು ಸಮುದಾಯದ ತಳ ಸಮುದಾಯಗಳ ಸಂಸ್ಕೃತಿಯು ಮೇಲೆ ಪ್ರಭಾವ ಬೀರುವುದು. ಇದರಿಂದ ಸುಂದರವಾದ ಆಚ್ಛಾದಿತವಾದ ಈ ಸಂಸ್ಕೃತಿಗಳು ಕಣ್ಮರೆಯಾಗುವ ಹಂತಕ್ಕೆ ತಲುಪುತ್ತಿವೆ. ಆದರೂ ಸಮಾಜದಲ್ಲಿ ಇವುಗಳ ಛಾಯೇ ಇನ್ನೂ ಕಂಡುಬರುತ್ತದೆ. ಅಂದರೆ ಬದಲಾವಣಯ ರೂಪದಲ್ಲಿ ಈ ಸಂಸ್ಕೃತಿಗಳು ಆಧುನಿಕ ಸಮಾಜಗಳಲ್ಲಿ ಆಚರಣೆಯಲ್ಲಿವೆ.

ವಿಜ್ಞಾನ ತಂತ್ರಜ್ಞಾನದ ಅಭಿವೃದ್ಧಿಯ ಪ್ರತಿಫಲವಾಗಿ ಕೈಗಾರಿಕೀಕರಣವು ತೀವ್ರಸ್ವರೂಪ ಪಡೆದುಕೊಂಡಿದೆ. ಆಧುನಿಕ ಬಂಡವಾಳಶಾಹಿಯಿಂದ ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ. ಇವು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ತಮ್ಮ ಸ್ಥಾನವನ್ನು ಅಕ್ರಮಿಸಿಕೊಂಡಿವೆ. ಈ ದೇಶಗಳ ಸಂಪನ್ಮೂಲಗಳನ್ನು ಬಳಸಿಕೊಂಡು ಅಧಿಕ ಆರ್ಥಿಕ ಉತ್ಪಾದನೆ ಮಾಡಿದರೂ ಸಹ ಈ ದೇಶಗಳಿಗೆ ಇವುಗಳಿಂದ ಯಾವುದೇ ಲಾಭವಿಲ್ಲ. ಇವುಗಳ ಲಾಭ ಬಂಡವಾಳಶಾಹಿಗಳೇ ಪಡೆದು ಕೊಳ್ಳುತ್ತಿರುವರು. ಈ ದೇಶದ ಜನರು ಇವುಗಳ ಮೇಲೆ ಯಾವುದೇ ಅಧಿಕಾರ

ಹೊಂದಿರುವುದಿಲ್ಲ. ಇವುಗಳಲ್ಲಿ ಉನ್ನತ ಹುದ್ದೆಗಳನ್ನು ನಿರ್ವಹಿಸುವವರು ಬೇರೆ ಬೇರೆ ದೇಶದವರಾಗಿವರು. ಇವರು ಇಂತಹ ಕೈಗಾರಿಕೆಗಳಲ್ಲಿ ಕೆಲಸಮಾಡುವ ಕಾರ್ಮಿಕರನ್ನು ಮಾನವೀಯತೆಯಿಂದ ನೋಡುವುದಿಲ್ಲ. ಇವರಿಗೆ ಕಾರ್ಮಿಕರು ವಸ್ತುಗಳಂತೆ ಕಾಣುವರು. ಹೆಚ್ಚು ಕಾರ್ಮಿಕರು ಕೆಳಜಾತಿಯವರು, ಬುಡಕಟ್ಟು ಸಮುದಾಯದವರೇ ಆಗಿರುವರು.

ತೀವ್ರ ಕೈಗಾರೀಕರಣದ ಪರಿಣಾಮವಾಗಿ ವಸ್ತುಗಳ ಉತ್ಪಾದನೆಯ ವಿಧಾನದಲ್ಲಿ, ಉತ್ಪಾದನೆಯ ವೇಗದಲ್ಲಿ, ವಸ್ತುಗಳ ಗುಣಮಟ್ಟಗಳಲ್ಲಿ ಬದಲಾವಣೆಯಾಗಿದೆ. ಅಲ್ಲದೇ ಹೊಸ ಹೊಸ ಉದ್ಯೋಗಾವಕಾಶಗಳು ಒದಗುತ್ತಿರುವುದರಿಂದ ಜನರ ದುಡಿಮೆಯ ರೂಪ ಸ್ವರೂಪಗಳು ಬದಲಾವಣೆಯಾದವು. ಇವುಗಳಲ್ಲಿ ಕೆಲಸ ಮಾಡಲು ಅಧಿಕ ಶ್ರಮಿಕರು ಅಗತ್ಯವಿರುವುದರಿಂದ, ಕಾಡುಗಳಲ್ಲಿರುವ ಬುಡಕಟ್ಟುಗಳನ್ನು ಹಳ್ಳಿಗಳಲ್ಲಿರುವ ಕೆಳಜಾತಿಗಳನ್ನು ಒಕ್ಕಲೆಬ್ಬಿಸಿ ಇಂತಹ ದುಡಿಮೆಗಳಲ್ಲಿ ತೊಡಗುವಂತೆ ಮಾಡುವರು. ಇವರು ಇಂತಹ ಕಾರ್ಖಾನೆಗಳ ಹತ್ತಿರದಲ್ಲಿಯೇ ನೆಲೆಸಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಇದರಿಂದಾಗಿ ಹಲವಾರು ಪ್ರದೇಶಗಳ ಜಾತಿಗಳ, ಧರ್ಮಗಳ ಜನರು ಒಟ್ಟಾಗಿ ನೆಲೆಸುವುದರಿಂದ, ಇಲ್ಲಿ ವಿವಿಧ ಸಂಸ್ಕೃತಿಗಳ, ಧರ್ಮಗಳ ಸಂಗಮವಾಗುವುದು. ಕಾರಣ ತಮ್ಮ ಮೂಲ ಸಂಸ್ಕೃತಿ, ಧರ್ಮಗಳು ಆಚರಿಸಿದರೂ ಇತರ ಸಂಸ್ಕೃತಿ ಧರ್ಮಗಳ ಆಚರಣೆಗಳಲ್ಲಿ ಪಾಲ್ಗೊಳ್ಳುವರು. ಇದರಿಂದ ಧಾರ್ಮಿಕ ಸಾಮರಸ್ಯ ಜಾತಿಯ ಸಡೀಲಿಕೆ ಇತ್ಯಾದಿಗಳಿಂದ ಬುಡಕಟ್ಟುಗಳಲ್ಲಿ, ತಳ ಸಮುದಾಯಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರ ಉಂಟಾಗುವುದು.

ಇಂತಹ ಕೈಗಾರಿಕೆಗಳಿಂದ ಕೈಗಾರಿಕಾ ನಗರಗಳು ಹುಟ್ಟಿಕೊಂಡಿವೆ. ನಗರೀಕರಣ ಪ್ರಕ್ರಿಯೆ ತೀವ್ರ ಸ್ವರೂಪ ಪಡೆದುಕೊಂಡಿದೆ. ಇದರಿಂದ ತಳಸಮುದಾಯಗಳನ್ನು ಬುಡಕಟ್ಟು ಸಮುದಾಯಗಳನ್ನು ನಗರಗಳು ಆಕರ್ಷಿಸುತ್ತಿವೆ. ಇದರಿಂದ ಈ ಸಮುದಾಯಗಳಲ್ಲಿ ವಲಸೆಯು ಕಂಡುಬರುತ್ತದೆ. ಕಾರಣ ಇಂತಹ ಸಮುದಾಯಗಳು ನಗರಗಳ ಕೊಳಚೆ ಪ್ರದೇಶಗಳಲ್ಲಿ ನೆಲೆಸಬೇಕಾದ ಅನಿವಾರ್ಯತೆಯುಂಟಾಗುವುದು. ಈ ಕೈಗಾರಿಕೀಕರಣ ಮತ್ತು ನಗರೀಕರಣದ ಪರಿಣಾಮವಾಗಿ ಸಮುದಾಯಗಳ ಜೀವನ ಶೈಲಿ, ಸಾಮಾಜಿಕ ಸಂಬಂಧಗಳು, ಸಾಮಾಜಿಕ ವರ್ತನೆಗಳು ಸಾಮಾಜಿಕ ನಿಯಂತ್ರಣದಲ್ಲಿ, ಸಾಮಾಜಿಕ ಸಂಚಲನೆಯಲ್ಲಿ ಬದಲಾವಣೆಯಾಗುತ್ತಿದೆ.

ಶಿಕ್ಷಣವು ಬದಲಾವಣೆಯನ್ನು ತರುವ ಬಹು ಪರಿಣಾಮಕಾರಿ ಸಾಧನವಾಗಿದೆ. ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಕೈಗಾರೀಕರಣ, ನಗರೀಕರಣ, ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮದಿಂದ ಶೈಕ್ಷಣಿಕ ಸ್ವರೂಪಗಳಲ್ಲಿ, ಶೈಕ್ಷಣಿಕ ವಿಧಾನಗಳಲ್ಲಿ ಬದಲಾವಣೆಯಾಗಿರುವುದು. ಇದು ಜನರ ಮನೋಭಾವ ಮತ್ತು ದೃಷ್ಟಿಕೋನಗಳನ್ನು ಬದಲಿಸುವುದು. ಶಿಕ್ಷಣವು ಆಧುನಿಕ

ಉದ್ಯೋಗಗಳನ್ನು ಗಳಿಸಲು, ಸಾಮಾಜಿಕ ಆರ್ಥಿಕ ಪ್ರತಿಫಲಗಳನ್ನು ಗಳಿಸಲು ಸಹಾಯಕವಾಗಿದೆ. ಈ ಶಿಕ್ಷಣವು ಈ ತಳಸಮುದಾಯಗಳು, ಬುಡಕಟ್ಟು ಸಮುದಾಯಗಳು ಮುಖ್ಯವಾಹಿನಿ ಎಂದು ಕರೆಯಲ್ಪಡುವ ಸಮಾಜದ ಸಂಪರ್ಕಕ್ಕಾಗಿ, ಕೈಗಾರಿಕೆಗಳಲ್ಲಿ ಉದ್ಯೋಗ ಪಡೆಯುವಲ್ಲಿ, ನಗರ ಜೀವನ ನಡೆಸಲು ಅತ್ಯಗತ್ಯವಾಗಿದೆ. ಆದರೆ ಇಂದು ತೃತೀಯ ಜಗತ್ತಿನ ದೇಶಗಳಲ್ಲಿ ಶಿಕ್ಷಣವು ಖಾಸಗೀಕರಣವಾಗಿದೆ. ಪರಿಣಾಮವಾಗಿ ತಳಸಮುದಾಯಗಳು, ಬುಡಕಟ್ಟುಗಳು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮಾತ್ರ ಪಡೆಯುವರು, ವೈದ್ಯಕೀಯ ಶಿಕ್ಷಣ, ತಾಂತ್ರಿಕ ಶಿಕ್ಷಣ, ಉನ್ನತ ಶಿಕ್ಷಣಗಳು ಕೇವಲ ಉನ್ನತ ವರ್ಗದವರ, ಮೇಲ್ಜಾತಿಯವರ ವಶವಾಗಿದೆ. ಅಲ್ಲದೆ ವಿಶ್ವವಿದ್ಯಾಲಯಗಳಲ್ಲಿ ಪಠ್ಯಕ್ರಮ, ಸಂಶೋಧನಾ ವಿಧಾನಗಳು ರಚಿತವಾಗುವುದು ಅಂತರಾಷ್ಟ್ರೀಯ ಮಟ್ಟದಲ್ಲಿ ಅಂದರೆ ಸಾಮ್ರಾಜ್ಯಶಾಹಿ ಹಿತಾಸಕ್ತಿಯನ್ನು ಅವಲಂಬಿಸಿ ರಚಿತವಾಗಿರುತ್ತವೆ.

ಇಂಗ್ಲೀಷ್ ಜಾಗತೀಕ ಭಾಷೆಯಾಗಿದೆ. ಈ ಸಂದರ್ಭದಲ್ಲಿ ಇಂಗ್ಲೀಷ್ ಭಾಷೆ ತಿಳಿಯದಿದ್ದರೆ ದಿನನಿತ್ಯದ ಬದುಕು ಕಷ್ಟವಾಗುತ್ತದೆ ಎಂದು ಜನರು ತಿಳಿದಿದ್ದಾರೆ. ಇಂಗ್ಲೀಷ್ ಭಾಷೆಯಿಂದಲೇ ಜಗತ್ತಿನ ಕೊಡುಕೊಳ್ಳುವಿಕೆ ವ್ಯವಹಾರಗಳು ನಡೆಯುವುದರಿಂದ, ತೃತೀಯ ಜಗತ್ತಿನ ರಾಷ್ಟ್ರಗಳು ಇಂಗ್ಲೀಷ್ ಭಾಷೆಯನ್ನು ಆಡಳಿತ ಭಾಷೆಯಾಗಿ ಮಾಡಿಕೊಂಡಿವೆ. ಪರಿಣಾಮವಾಗಿ ವಾಣಿಜ್ಯ ವ್ಯಾಪಾರ ಮಾಡುವುದಕ್ಕೆ, ಉನ್ನತ ಶಿಕ್ಷಣಕ್ಕೆ, ಉನ್ನತ ಹುದ್ದೆಗಳನ್ನು ಪಡೆಯಲು ಇಂಗ್ಲೀಷ್ ಅತ್ಯಗತ್ಯವಾಗಿದೆ. ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಲು ಮತ್ತು ಸಮಾಜದ ಅಭಿವೃದ್ಧಿ ಪಡಿಸುವ ಮಾನವಿಕ ವಿಜ್ಞಾನಗಳು, ಮತ್ತು ಭೌತ ವಿಜ್ಞಾನಗಳು ಇಂಗ್ಲೀಷ್ ಭಾಷೆಯಲ್ಲಿಯೇ ಇವೆ. ಅಲ್ಲದೇ ಪ್ರಪಂಚದ ಮಹಾಕಾವ್ಯಗಳು ಧಾರ್ಮಿಕ ಗ್ರಂಥಗಳು, ಪ್ರಮುಖ ಕಥೆ ಕಾದಂಬರಿಗಳು ಇಂಗ್ಲೀಷ್‌ಗೆ ಭಾಷಾಂತರವಾಗಿವೆ. ಆಧುನಿಕ ಬದುಕಿಗೆ ಹೊಂದಿಕೊಳ್ಳಲು, ಬೇರೆ ಬೇರೆ ದೇಶಗಳ ಸಾಹಿತ್ಯ, ಚರಿತ್ರೆಗಳನ್ನು ತಿಳಿಯಬೇಕಾದರೆ ಶಿಕ್ಷಣ ಅಗತ್ಯವಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡಿದ ಹಲವಾರು ಅಧ್ಯಯನಕಾರರ ಅಧ್ಯಯನವು ಇಂಗ್ಲೀಷ್‌ನಲ್ಲಿದೆ. ಅಲ್ಲದೆ ಇವರ ಅಧ್ಯಯನದಿಂದ ಬುಡಕಟ್ಟು ಭಾಷೆಗಳು ಆಧುನಿಕ ಜಗತ್ತಿಗೆ ಪರಿಚಯವಾದವು ಅಲ್ಲದೇ ಇಂಗ್ಲೀಷ್ ಭಾಷೆಯನ್ನು ತಮ್ಮ ಪರಿಶುದ್ಧ ಭಾಷೆಯಲ್ಲಿ ಸೇರಿಸಿ ಮಾತನಾಡುವುದಕ್ಕೆ ಕಲಿತುಕೊಂಡವು. ಈ ಇಂಗ್ಲೀಷ್ ಭಾಷೆಯಿಂದಾಗಿಯೇ ಆಧುನಿಕ ಜಗತ್ತಿಗೆ ಮುಖಮಾಡಲು ಸಾಧ್ಯವಾಯಿತು.

ಒಟ್ಟಾರೆಯಾಗಿ ತೃತೀಯ ಜಗತ್ತಿನ ಆರ್ಥಿಕಾಭಿವೃದ್ಧಿಗೆ ಕಾರಣವಾಗುವ ಮಹತ್ವದ ಕ್ಷೇತ್ರಗಳನ್ನು ಖಾಸಗೀಕರಣದ ಹೆಸರಲ್ಲಿ ಸಾಮ್ರಾಜ್ಯಶಾಹಿಗಳು ವಶಪಡಿಸಿಕೊಂಡರೆ,

ಉದಾರೀಕರಣದ ನೆಪದಲ್ಲಿ ತೃತೀಯ ಜಗತ್ತಿನ ಒಟ್ಟು ಮಾರುಕಟ್ಟೆಯ ನೀತಿಯನ್ನು ರೂಪಿಸುವ, ನಿಯಂತ್ರಿಸುವ ಅಧಿಕಾರವನ್ನು ಸಾಮ್ರಾಜ್ಯಶಾಹಿ ಪಡೆದುಕೊಂಡಿದೆ. ಅಲ್ಲದೇ ಜಾಗತೀಕ ಸಂಸ್ಥೆಗಳು ಹೂಡುವ ಬಂಡವಾಳವು ತೃತೀಯ ಜಗತ್ತಿನ ದೇಶಗಳ ಅಭಿವೃದ್ಧಿಗಾಗಿ ಎಂದು ಹೇಳಿಕೊಂಡರೂ ಅವುಗಳ ಉದ್ದೇಶ ಆರ್ಥಿಕ ಸಂಪನ್ಮೂಲಗಳನ್ನು ವಶಪಡಿಸಿಕೊಳ್ಳುವುದಾಗಿದೆ. ಅಂದರೆ ಸಾಮ್ರಾಜ್ಯಶಾಹಿಯು ತೃತೀಯ ಜಗತ್ತಿನ ಆರ್ಥಿಕ ಸಂಪನ್ಮೂಲಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದೇ ಇದರ ಉದ್ದೇಶವಾಗಿದೆ.

ಇದರ ಪರಿಣಾಮದಿಂದ ಸಮಾಜ, ಸಂಸ್ಕೃತಿ ಸ್ಥಿತ್ಯಂತರಗೊಂಡಿವೆ. ಕಾರಣ ಆರ್ಥಿಕ ಅಂಶಗಳು ಧರ್ಮವನ್ನೊಳಗೊಂಡತೆ ಇತರ ಅಂಶಗಳನ್ನು ಪ್ರಭಾವಿಸುತ್ತವೆ ಎಂಬ ಮಾರ್ಕ್ಸ್‌ನ ನಿಲುವು ಸ್ಪಷ್ಟವಾಗುವುದು.

ಜಾಗತೀಕರಣದಿಂದ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿನ ಬದಲಾವಣೆಯು, ಈ ದೇಶದ ತಳ ಸಮುದಾಯಗಳು, ಬುಡಕಟ್ಟು ಸಮುದಾಯಗಳು ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಕಾರಣವಾಗಿದೆ. ಅದರಂತೆ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಸಾಂಸ್ಕೃತಿಕ ಸ್ಥಿತ್ಯಂತರಗೊಂಡಿವೆ.

ಸಾಮಾನ್ಯವಾಗಿ ಬುಡಕಟ್ಟುಗಳಲ್ಲಿ ಅವಿಭಕ್ತ ಕುಟುಂಬಗಳು ಬುಡಕಟ್ಟು ನೆಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದವು. ಆದರೆ ಬೇಡ ಮತ್ತು ಮೇದ ಸಮುದಾಯಗಳಲ್ಲಿ ಬುಡಕಟ್ಟು ಲಕ್ಷಣಗಳು ಮರೆಯಾಗಿ ಜಾತಿಯ ಸ್ವರೂಪ ಮೂಡಿವೆ. ಕಾರಣ ಈ ಜಾಗತೀಕರಣ ಸಂದರ್ಭದಲ್ಲಿ ಈ ಸಮುದಾಯಗಳಲ್ಲಿ ಶೇ ೮೦% ವಿಭಕ್ತ ಕುಟುಂಬಗಳು ಕಂಡುಬರುತ್ತವೆ. ಅಷ್ಟೇ ಅಲ್ಲದೆ ನಗರಗಳಲ್ಲಿ ಕೇಂದ್ರಿತ ಕುಟುಂಬಗಳು ಮತ್ತು ಅಣು ಕುಟುಂಬಗಳು ಸಹ ಕಂಡು ಬರುತ್ತಿವೆ. ಪರಿಣಾಮವಾಗಿ ಕುಟುಂಬದ ಮುಖ್ಯಸ್ಥನು ಕುಟುಂಬದ ಹಿರಿಯನು, ಪುರುಷನೇ ಆಗಿರಬೇಕಾದ ಅನಿವಾರ್ಯತೆಯಿಲ್ಲ. ಈಗ ಸಾಮಾನ್ಯವಾಗಿ ವಿಭಕ್ತ ಮತ್ತು ಅಣುಕುಟುಂಬಗಳು ಹೆಚ್ಚಾಗಿರುವುದರಿಂದ, ಈ ಕುಟುಂಬಗಳ ಮುಖ್ಯಸ್ಥರು ಸ್ತ್ರೀ–ಪುರುಷರಿಬ್ಬರೂ ನಿಭಾಯಿಸುವವರು ಮತ್ತು ಕುಟುಂಬದ ಮುಖ್ಯ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಕುಟುಂಬದ ಎಲ್ಲರೂ ಸೇರಿ ಚರ್ಚಿಸಿ ತೆಗೆದುಕೊಳ್ಳುವರು. ಬುಡಕಟ್ಟು ಸ್ತ್ರೀಯರು ಆಧುನಿಕ ಸಮಾಜದಲ್ಲಿಯ ಸ್ತ್ರೀಯರಷ್ಟು ಕೌಟುಂಬಿಕ ಸ್ವಾತಂತ್ರ್ಯ ಪಡೆಯದಿದ್ದರೂ ಸಹ ಕೌಟುಂಬಿಕವಾಗಿ ಸ್ವಲ್ಪಮಟ್ಟಿಗಾದರೂ ಸ್ವತಂತ್ರರಾಗಿದ್ದಾರೆ. ಒಟ್ಟಾರೆಯಾಗಿ ಬುಡಕಟ್ಟುಗಳ ಕುಟುಂಬದ ಮುಖ್ಯಸ್ಥನ ಅಧಿಕಾರದಲ್ಲಿ ಮತ್ತು ಕೌಟುಂಬಿಕ ಸಂಬಂಧಗಳಲ್ಲಿ ಸ್ಥಿತ್ಯಂತರವಾಗಿವೆ.

ಈ ಎರಡು ಸಮುದಾಯಗಳು ಜಾತಿಯ ಸ್ವರೂಪವನ್ನು ಪಡೆದಿದ್ದರಿಂದ, ಜಾತಿಯ ಶ್ರೇಣೀಕರಣದಲ್ಲಿ ಕೆಳಸ್ಥಾನವನ್ನು ಪಡೆದಿವೆ. ಅಲ್ಲದೆ ಇತರ ಜಾತಿಗಳಿಗಿಂತ ಹಿಂದುಳಿದ ಜಾತಿಗಳು

ಆಗಿವೆ. ವರ್ತಮಾನದಲ್ಲಿ ಜಾತಿಯು ಅಂತರ ಕಡಿಮೆಯಾಗಿದ್ದಕ್ಕೆ, ಮತ್ತು ಜಾತಿ ಜಾತಿಗಳ ಮಧ್ಯ ಇರುವ ನಿರ್ಬಂಧಗಳಲ್ಲಿ ಸಡಿಲಿಕೆಯಾಗಿದೆ. ಜಾಗತೀಕರಣದ ಪರಿಣಾಮವಾಗಿ ಎಲ್ಲಾ ಜಾತಿಗಳು ಸ್ವಾವಲಂಬಿಗಳಾದ್ದರಿಂದ ಇನ್ನೊಂದು ಜಾತಿಯು ಆಧೀನದಲ್ಲಿರಬೇಕಾದ ಅನಿವಾರ್ಯತೆಯಿಲ್ಲ.

ಈ ಸಮುದಾಯಗಳಲ್ಲಿ ಏರ್ಪಾಟು ಮದುವೆಗಳಿವೆ. ಈ ಮದುವೆಗಳು ಸಾಮಾನ್ಯವಾಗಿ ಶಾಸ್ತ್ರೋಕ್ತವಾಗಿ ನಡೆಯುತ್ತವೆ. ಆದರೆ ಇವುಗಳ ರೂಪ, ಸ್ವರೂಪ ಬದಲಾಗಿರುವವು. ವಧು-ವರರು ಬಾಳ ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರವನ್ನು ಪಡೆದುಕೊಂಡಿರುವರು. ಇವುಗಳು ತಮ್ಮ ಮೂಲ ಆಚರಣೆಗಳನ್ನು ರೂಪಾಂತರಿಸಿ ಕೊಂಡಿವೆ. ಆಧುನಿಕ ಆಚರಣೆಗಳಾದ ಹುಟ್ಟುಹಬ್ಬದ ಆಚರಣೆಗಳು, ವಿವಾಹದ ವಾರ್ಷಿಕೋತ್ಸವ ಇತ್ಯಾದಿ ಹಲವಾರು ಅಚರಣೆಗಳನ್ನು ವಿಜೃಂಭಣೆಯಿಂದ ಆಚರಿಸುತ್ತವೆ.

ಈ ಸಮುದಾಯಗಳ ಜನರು ಸಾಮಾನ್ಯವಾಗಿ, ಹೊಸ ಹೊಸ ಉದ್ಯೋಗಾವಕಾಶ ಗಳಿಂದಾಗಿ, ಸ್ವಾವಲಂಭಿಗಳು, ಸ್ವಾರ್ಥಿಗಳು ಆಗಿದ್ದಾರೆ. ಇದರಿಂದ ಸಮುದಾಯದ ಐಕ್ಯತೆ ಸಾಮಾಜಿಕ ಸಂಬಂಧಗಳು, ಸಾಮಾಜಿಕ ವರ್ತನೆಗಳು, ಸ್ಥಿತ್ಯಂತರಗೊಂಡಿವೆ. ಅಂದರೆ ಸಮುದಾಯದ ಐಕ್ಯತೆ ಸಡಿಲಗೊಂಡಿದೆ. ಸಾಮಾಜಿಕ ಸಂಬಂಧಗಲ್ಲಿ ಆತ್ಮೀಯತೆ, ಅನ್ಯೋನ್ಯತೆ ಕಾಣುತ್ತಿಲ್ಲ ಹಾಗೂ ಸಾಮಾಜಿಕ ವರ್ತನೆಗಳಲ್ಲಿ ನಯ ವಿನಯ ವಿಧೇಯತೆಗಳು ಮಾಯವಾಗಿವೆ. ಒಟ್ಟಾರೆಯಾಗಿ ಸಮುದಾಯದ ರಚನೆ ಮತ್ತು ಕಾರ್ಯಗಳು ಸ್ಥಿತ್ಯಂತರಗೊಂಡಿವೆ.

ಅರಿಸ್ಟಾಟಲನು ಮಾನವನು ಸಂಘಜೀವಿ ಎಂದು ಹೇಳುವುದರ ಜೊತೆಗೆ ರಾಜಕೀಯ ಜೀವಿಯಾಗಿದ್ದಾನೆ ಎಂದು ಹೇಳಿದ್ದಾನೆ. ಇದರಿಂದ ಮಾನವನಿಗೆ ರಾಜಕೀಯವು ಅತ್ಯಗತ್ಯವಾಗಿದೆ ಎಂದು ಸ್ಪಷ್ಟವಾಗುತ್ತದೆ. ಸುರಪುರ ತಾಲೂಕಿನ ಬೇಡ ಮತ್ತು ಮೇದ ಸಮುದಾಯಗಳ ರಾಜಕೀಯ ಜೀವನದಿಂದ ಈ ಮಾತು ಸ್ಪಷ್ಟವಾಗುವುದು. ಈ ಸಮುದಾಯಗಳು ಪ್ರಜಾಸತ್ತಾತ್ಮಕ ಸರ್ಕಾರ ಪದ್ಧತಿಯಲ್ಲಿದ್ದು, ಸಂವಿಧಾನ ಬದ್ಧವಾಗಿ ಮತಹಾಕುವ ಹಕ್ಕನ್ನು ಹೊಂದಿದ್ದಾರೆ. ಆದರೆ ಶೇ. ೪೦. ಜನರು ಸ್ವತಂತ್ರವಾಗಿ, ರಾಜಕೀಯ ಪ್ರಜ್ಞೆಯಿಂದ ಮತ ಚಲಾಯಿಸುತ್ತಿಲ್ಲ. ಇದರಿಂದ ಇವರ ಹಕ್ಕು ದುರುಪಯೋಗವಾಗುತ್ತಿದೆ. ಈ ಸಮುದಾಯಗಳ ಜನರು ಸಾಮಾನ್ಯವಾಗಿ ಎಲ್ಲಾ ಪಕ್ಷಗಳ ಬೆಂಬಲಿಗರಾಗಿದ್ದಾರೆ. ಇವರು ಯಾವುದೇ ರಾಜಕೀಯ ಬದ್ಧತೆ ಮತ್ತು ರಾಜಕೀಯ ಸಂಹಿತೆಯನ್ನು ಹೊಂದಿಲ್ಲ. ಇವರು ಬೇರೆ ಬೇರೆ ಚುನಾವಣೆಯಲ್ಲಿ ಬೇರೆ ಬೇರೆ ಪಕ್ಷಗಳನ್ನು ಬೆಂಬಲಿಸಿರುವುದರಿಂದ ಈ ಮಾತು ಸ್ಪಷ್ಟವಾಗುವುದು. ಈ ಸಮುದಾಯದವರು ಮೀಸಲಾತಿಯ ಮೂಲಕ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಜಿಲ್ಲಾ ಪಂಚಾಯಿತಿಗಳ

ಮಟ್ಟಗಳಲ್ಲಿ ಅಧಿಕಾರಗಳನ್ನು ಪಡೆದಿವೆ. ಆದರೆ ಈ ಅಧಿಕಾರಗಳನ್ನು ಮೇಲ್ಜಾತಿಯುವರು, ಬಂಡವಾಳ ಶಾಹಿಗಳ ಅಧೀನವಾಗಿ ಚಲಾಯಿಸುತ್ತಿವೆ. ಇಂತಹ ಅಧಿಕಾರ ಇವುಗಳಿಗೆ ನಾಮ ಮಾತ್ರವಾಗಿದೆ.

ಈ ಎರಡು ಸಮುದಾಯುಗಳಲ್ಲಿ ಕುಲಪಂಚಾಯಿತಿ ಇದೆ. ಆದರೆ ಇದು ಇಂದು ಯಾವುದೇ ಅಂತಿಮ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿಲ್ಲ. ಇದು ಯಾವುದೇ ದಂಡ ವಿಧಿಸುವ ಅಥವಾ ಶಿಕ್ಷೆ ವಿಧಿಸುವ ಅಧಿಕಾರ ಕಳೆದುಕೊಂಡಿದೆ. ಇದರ ಒಟ್ಟಾರೆಯ ಸ್ವರೂಪವು ಬದಲಾಗಿದೆ. ಕುಲಪಂಚಾಯಿತಿ ನಿರ್ವಹಣೆ ಮಾಡುವವರಲ್ಲಿ ಭಿನ್ನತೆ ಉಂಟಾಗಿದೆ. ಅಲ್ಲದೆ ಇದನ್ನು ಯಾರೂ ಗೌರವಿಸುತ್ತಿಲ್ಲ. ಕಾರಣ ಸಮುದಾಯದ ವ್ಯಾಜ್ಯಗಳು ಕೋರ್ಟು, ಕಛೇರಿ ಮೆಟ್ಟಿಲುಗಳನ್ನು ತುಳಿಯುತ್ತಿವೆ. ಕಾರಣ ಕುಲಪಂಚಾಯಿತಿ ಮರೆಯಾಗುತ್ತಿದೆ.

ಈ ಸಮುದಾಯುಗಳು ಈ ಪ್ರದೇಶದಲ್ಲಿ ಯಾವುದೇ ವಾದ ಸಿದ್ದಾಂತ ತತ್ವಗಳಿಗೆ ಜೋತು ಬಿದ್ದಿಲ್ಲ ಶೇ. ೪೦% ಜನರು ದಿನನಿತ್ಯದ ಬದುಕು ನಡೆಸಲು ತೊಂದರೆ ಇರುವುದರಿಂದ ಇವರು ರಾಜಕೀಯದಿಂದ ದೂರ ಉಳಿದಿದ್ದಾರೆ. ಈ ಸಮುದಾಯುಗಳಲ್ಲಿ ಜಾತಿ ಸಂಘಟನೆಗಳಿದ್ದರೂ ಅವು ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಹಮ್ಮಿಕೊಳ್ಳುವ ಮಟ್ಟದಲ್ಲಿಲ್ಲ. ಅವು ಕೇವಲ ಲೇಟರ್ ಪ್ಯಾಡ್ ಸಂಘಟನೆಗಳಾಗಿ ಉಳಿದಿವೆ.

ಬುಡಕಟ್ಟುಗಳಲ್ಲಿ ಯಾವುದೆ ಧರ್ಮವಿರಲಿಲ್ಲ ಅದಕ್ಕೆ ಬದಲಾಗಿ ಅಧ್ಯಾತ್ಮ ಅಥವಾ ಅನುಭಾವವಿತ್ತು. ಆಧುನಿಕ ಧರ್ಮಗಳಂತೆ ಪೂರ್ವಾಗ್ರಹ ಪೀಡಿತವಾದ ಮತ್ತು ಮೂಲಭೂತವಾದ ಧರ್ಮವಾಗಿರಲಿಲ್ಲ. ಪ್ರಸ್ತುತ ಸಂದರ್ಭದಲ್ಲಿ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳ ಅಧ್ಯಯನದಿಂದ ಈ ಸಮುದಾಯಗಳು ಪೂರ್ವಾಗ್ರಹ ಪೀಡಿತವಾದ ಮತ್ತು ಮೂಲಭೂತವಾದ ಧರ್ಮಗಳಿಗೆ ಆತುಕೊಂಡಿರುವುದು ತಿಳಿಯುತ್ತದೆ. ಸಾಮಾನ್ಯವಾಗಿ ಈ ಸಮುದಾಯುಗಳು ಹಿಂದೂ ಧರ್ಮದಲ್ಲಿ ಸೇರಿ ಹೋಗಿವೆ. ಪೂರ್ವದಲ್ಲಿ ಸಮುದಾಯುಗಳ ಆಧ್ಯಾತ್ಮ ಮತ್ತು ಹಿಂದೂ ಧರ್ಮ ಭಿನ್ನವಾಗಿದ್ದವು. ಆದರೆ ಈ ದಿನಗಳಲ್ಲಿ ಆ ಸಮುದಾಯುಗಳ ಆಧ್ಯಾತ್ಮ ಮರೆಯಾಗಿ ಹಿಂಧೂಧರ್ಮದ ಛಾಯೇ ಅತಿಯಾಗಿರುವುದು ಕಂಡು ಬರುತ್ತದೆ. ವೈಧಿಕ ಧರ್ಮಕ್ಕೆ ಸಂಬಂಧಿಸಿದ ಹಬ್ಬ ಹರಿದಿನಗಳಾದ ಯುಗಾದಿ, ದೀಪಾವಳಿ, ಮಹಾನವಮಿಯನ್ನು ಆಚರಿಸುತ್ತವೆ. ಅಲ್ಲದೇ ಸತ್ಯನಾರಾಯಣವ್ರತ, ಲಕ್ಷ್ಮೀ ವ್ರತ, ಗೌರಿವ್ರತ, ಇತ್ಯಾದಿ ವ್ರತಗಳನ್ನು ಈ ಸಮುದಾಯುಗಳು ಮಾಡುತ್ತಿವೆ. ಶೈವ ಮತ್ತು ವೈಷ್ಣವ ಪಂಥದ ದೇವರುಗಳನ್ನು ಪೂಜಿಸುತ್ತಿದ್ದಾರೆ. ಈ ಪಂಥಗಳ ಮಠಗಳ ಭಕ್ತರು ಮತ್ತು ಶಿಷ್ಯರಾಗಿದ್ದಾರೆ. ಪ್ರಸ್ತುತ ಪ್ರಖ್ಯಾತಿ ಪಡೆದ ದೇವರುಗಳಾದ ತಿರುಪತಿಯ ವೆಂಕಟರಮಣ, ಧರ್ಮಸ್ಥಳದ ಮಂಜುನಾಥ,

ಮಂತ್ರಾಲಯದ ರಾಘವೇಂದ್ರ, ಶ್ರೀಶೈಲ ಮಲ್ಲಿಕಾರ್ಜುನನ್ನು ಶಬರಿ ಅಯ್ಯಪ್ಪಸ್ವಾಮಿ ಈ ಸಮುದಾಯದವರು ಆರಾಧಿಸುತ್ತಿರುವರು.

ಈ ಸಮುದಾಯಗಳು ಹಿಂದೂ ಧರ್ಮದ ಸಂಸ್ಕಾರಗಳಾದ ಗರ್ಭದಾನ, ಪುಂಸವನ. ಸೀಮಂತ, ನಾಮಕರಣ, ಜಾತಕರ್ಮ, ಇತ್ಯಾದಿ ಸಂಸ್ಕಾರಗಳನ್ನು ಆಚರಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಆಚರಣೆಯ ವಿಧಿವಿಧಾನಗಳಲ್ಲಿ ಸಮುದಾಯದ ಒತ್ತಡದಿಂದ ರೂಪಾಂತರವಾಗಿವೆ. ಅಲ್ಲದೆ ಬುಡಕಟ್ಟುಗಳು ಮೂಲ ಕ್ರಿಯಾವಿಧಿಗಳು ನಂಬಿಕೆಗಳು. ಮೌಲ್ಯಗಳ ಜೊತೆಗೆ ಹಿಂದೂರ್ಮವು ಸೇರಿಕೊಂಡಿರುವದು ಇವು ಪ್ರಸ್ತುತ ಕಾಲಮಾನಕ್ಕನುಗುಣವಾಗಿ ರೂಪಾಂತರ ಹೊಂದಿವೆ.

ಬುಡಕಟ್ಟು ಸಮುದಾಯಗಳಲ್ಲಿ ಶೈಕ್ಷಣಿಕ ಸಂಸ್ಥೆಗಳು ಎಂಬ ಪ್ರತ್ಯೇಕ ಸಂಸ್ಥೆಗಳೇ ಇದ್ದಿರಲಿಲ್ಲ. ಇವರಲ್ಲಿ ಅನೌಪಚಾರಿಕ ಶಿಕ್ಷಣವು ಆಚರಣೆಯಲ್ಲಿತ್ತು. ಇಂತಹ ಶಿಕ್ಷಣ ನೀಡುವ ಹೊಣೆಗಾರಿಕೆ ಕುಟುಂಬದ್ದಾಗಿತ್ತು. ಸಂಸ್ಕೃತಿಗಳು ಸಂಕೀರ್ಣಗೊಳ್ಳುತ್ತಾ ಬಂದಂತೆ ಕುಟುಂಬದೊಳಗಣ ಕಲಿಕೆ ಅಸಾಧ್ಯವಾಗಿ ಶೈಕ್ಷಣಿಕ ಸಂಸ್ಥೆಗಳು ಹುಟ್ಟಿಕೊಂಡವು ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಸಹ ಸರಳತೆಯಿಂದಲೇ ಸಂಕೀರ್ಣಗೊಂಡಿವೆ. ಈ ಸಮುದಾಯಗಳು ಸಹ ಅನೌಪಚಾರಿಕ ಶಿಕ್ಷಣದಿಂದ ಔಪಚಾರಿಕ ಶಿಕ್ಷಣವನ್ನು ಪಡೆಯುತ್ತಿವೆ. ಇಂತಹ ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ಸಂವರ್ದನೆಗೆ, ಉದ್ಯೋಗಗಳನ್ನು ಪಡೆದು ಕೊಳ್ಳಲು ಉನ್ನತ ಸಾಮಾಜಿಕ ಸ್ಥಾನಮಾನಗಳನ್ನು ಪಡೆಯಲು ಶಿಕ್ಷಣವು ಅವಶ್ಯಕ. ಈ ಶಿಕ್ಷಣವು ಇಂತಹ ಸಮುದಾಯಗಳ ಸಂವರ್ಧನೆಗೂ ಸಹ ಅವಶ್ಯಕವಾಗಿವೆ. ಸುರಪುರ ತಾಲೂಕಿನ ಅತ್ಯಂತ ಚಿಕ್ಕ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳಿವೆ. ಒಂದು ಅಥವಾ ಎರಡು ಕಿ.ಮೀ. ಅಂತರದಲ್ಲಿ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಿವೆ. ಈ ಕಾರಣಕ್ಕಾಗಿ ಈ ಸಮುದಾಯಗಳ ಪ್ರಾಥಮಿಕ ಮಾಧ್ಯಮಿಕ ಶಿಕ್ಷಣ ಅಧಿಕವಾಗಿದೆ. ಆದರೆ ಸ್ನಾತಕೋತ್ತರ ಶಿಕ್ಷಣ, ತಾಂತ್ರಿಕ ಶಿಕ್ಷಣ ವೈದ್ಯಕೀಯ ಶಿಕ್ಷಣದಲ್ಲಿ ಬೆರಳೆಣಿಕೆಯಷ್ಟು ಜನರಿರುವುದು ಕಂಡುಬರುತ್ತದೆ. ತಾಂತ್ರಿಕ ಶಿಕ್ಷಣ ಮತ್ತು ವೈದ್ಯಕೀಯ ಶಿಕ್ಷಣ ಪಡೆಯುವವರು ಆರ್ಥಿಕ ಹಿನ್ನಲೆ, ಕೌಟುಂಬಿಕ ಹಿನ್ನಲೆ, ರಾಜಕೀಯ ಹಿನ್ನಲೆಯನ್ನು ಹೊಂದಿದವರಾಗಿರುತ್ತಾರೆ. ಆದರೆ ಬೇಡ ಮತ್ತು ಮೇದ ಸಮುದಾಯಗಳಲ್ಲಿ ಅಂತಹ ಹಿನ್ನಲೆಯನ್ನು ಹೊಂದಿದವರು ತುಂಬಾ ಕಡಿಮೆಯಿದ್ದಾರೆ. ಆರ್ಥಿಕತೆಯ ಶಿಕ್ಷಣದ ಮಟ್ಟವನ್ನು ನಿರ್ಧರಿಸುವುದು ಬಡವರು ಮತ್ತು ಶ್ರೀಮಂತರ ಶಿಕ್ಷಣ ಮಟ್ಟದಲ್ಲಿ ಭಿನ್ನತೆಯಿರುತ್ತದೆ.

ಈ ಸಮುದಾಯಗಳಲ್ಲಿ ಶಾಲೆ ಬಿಡುವ ಮಕ್ಕಳ ಸಂಖ್ಯೆ ಗಣನೀಯವಾಗಿ ಹೆಚ್ಚಾಳವಾಗಿರುವುದು. ಅದರಲ್ಲೂ ಹೆಣ್ಣು ಮಕ್ಕಳ ಸಂಖ್ಯೆ ಇನ್ನೂ ಅಧಿಕವಾಗಿರುವುದು. ಕೃಷಿ

ಕೆಲಸಕ್ಕೆ ಹೆಚ್ಚು ಜನರು ಬೇಕಾಗುವುದು, ಶಾಲೆಯಿಂದ ದುಡಿಯುವ ವಯಸ್ಸು ಕಡಿಮೆಯಾಗುವುದು, ಸಂಪ್ರದಾಯದ ಜಾಡ್ಯ ಹೆಣ್ಣಮಕ್ಕಳನ್ನು ಶಾಲೆಗೆ ಕಳುಹಿಸದೇ ಇರುವುದು ಇತ್ಯಾದಿಗಳು ಶಾಲೆ ಬಿಡುವ ಮಕ್ಕಳ ಸಂಖ್ಯೆಯು ಹೆಚ್ಚಳಕ್ಕೆ ಕಾರಣವಾಗಿವೆ. ಈ ಸಮುದಾಯುದವರು ಹೆಚ್ಚಾಗಿ ಕಲಾ ವಿಭಾಗವನ್ನು ಆಯ್ಕೆಮಾಡಿಕೊಳ್ಳುವರು. ಆದರೆ ವಿಜ್ಞಾನ ವಾಣಿಜ್ಯ ಐ.ಟಿ.ಐ. ಡಿಪ್ಲೋಮಾದಂತಹ ವಿಷಯುಗಳ ಆಯ್ಕೆಯಿಂದ ದೂರ ಉಳಿದಿವೆ. ಇವರು ಹೆಚ್ಚಾಗಿ ಕನ್ನಡ ಮಾಧ್ಯಮದಲ್ಲಿ, ಕನ್ನಡ ಶಾಲೆಯ ಶಿಕ್ಷಣವನ್ನು ಪಡೆಯುತ್ತಿರುವರು. ಇದರ ಪರಿಣಾಮದಿಂದ ಈ ಸಮುದಾಯುಗಳಲ್ಲಿ ನಿರುದ್ಯೋಗಿಗಳ ಪ್ರಮಾಣ ಅಧಿಕವಾಗಿರುವುದು ಅದಕ್ಕಾಗಿ ಈ ಸಮುದಾಯುಗಳು ಇಂದು ITI ಡಿಪ್ಲೋಮಾದಂತಹ ಶಿಕ್ಷಣದ ಕಡೆ ಮುಖ ಮಾಡಿವೆ. ಶಿಕ್ಷಿತ ಕುಟುಂಬಗಳು ಮತ್ತು ನಗರಗಳಲ್ಲಿಯ ಕುಟುಂಬಗಳು ತಮ್ಮ ಮಕ್ಕಳನ್ನು ಇಂಗ್ಲೀಷ್ ಮಾಧ್ಯಮದಲ್ಲಿ ಶಿಕ್ಷಣ ಕೊಡಿಸುತ್ತಿದ್ದಾರೆ. ಆದರೆ ದುಡಿಯುವ ವರ್ಗದವರು ಇನ್ನೂ ಅದೇ ಹಂತದಲ್ಲಿ ಇದ್ದಾರೆ.

ಜಾಗತೀಕರಣದಿಂದ ಬಂದ ಖಾಸಗೀಕರಣದಿಂದ ಶಿಕ್ಷಣವೂ ಖಾಸಗೀಕರಣಗೊಂಡಿರುವುದು. ಖಾಸಗೀ ಶಿಕ್ಷಣ ಸಂಸ್ಥೆಗಳಲ್ಲಿ ಅಧಿಕ ಶಾಲಾ ಶುಲ್ಕ, ಶಾಲಾ ಅಭಿವೃದ್ಧಿ ಶುಲ್ಕ ಇತ್ಯಾದಿಗಳು ಅಧಿಕವಾಗಿದೆ. ಆದರೆ ಶಿಕ್ಷಣದ ಗುಣಮಟ್ಟದ ಉತ್ತಮವಾಗಿದೆ. ಆದರೆ ಈ ಸಮುದಾಯಗಳು, ಆರ್ಥಿಕವಾಗಿ ಹಿಂದುಳಿದಿದ್ದರಿಂದ ಇಂತಹ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುಲು ಸಾಧ್ಯವಾಗುವುದಿಲ್ಲ. ಜಾಗತೀಕರಣ ಯುಗದಲ್ಲಿ ಕಂಪ್ಯೂಟರ್ ಶಿಕ್ಷಣ ವ್ಯಕ್ತಿತ್ವ ಶಿಕ್ಷಣ ಇತ್ಯಾದಿಗಳು ಅವಶ್ಯಕವಾಗಿವೆ. ಸಮುದಾಯುಗಳಿಗೆ ಇವುಗಳ ಕೊರತೆಯಿದೆ. ಇದು ಸ್ಪರ್ಧಾಲೋಕವಾಗಿರುವುದರಿಂದ ಇಲ್ಲಿ ಎಲ್ಲರೂ ಸಮಾನವಾಗಿ ಸ್ಪರ್ಧೆ ಮಾಡಬೇಕಾಗಿರುವುದು. ಈ ಸಮುದಾಯದವರು ಶೈಕ್ಷಣಿಕವಾಗಿ ಹಿಂದುಳಿದಿದ್ದರಿಂದ ಸ್ಪರ್ಧೆಯಲ್ಲಿ ಗೆಲುವು ಸಾಧಿಸಲು ಅಸಾಧ್ಯವಾಗಿದೆ. ಈ ಬುಡಕಟ್ಟು ಸಮುದಾಯಗಳಿಗಾಗಿಯೇ ಸ್ಥಾಪಿತವಾದ ಆಶ್ರಮ ಶಾಲೆಗಳು ಅಥವಾ ಇತರೆ ಶಾಲೆಗಳು ಈ ಪ್ರದೇಶಗಳಲ್ಲಿಲ್ಲಾ ಆದರೆ ಸರ್ಕಾರಿ ಶಾಲೆಗಳಲ್ಲಿ ಪರಿಶಿಷ್ಟ ಪಂಗಡಕ್ಕಾಗಿಯೇ ಕೆಲವು ಸ್ಥಾನಗಳು ಮೀಸಲಿರುತ್ತವೆ. ಸರ್ಕಾರದ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀತಿಯಿಂದ ಪ್ರಾಥಮಿಕ ಹಂತದವರೆಗೂ ಸರಳವಾಗಿ ಶಿಕ್ಷಣ ಪಡೆಯುವ ಅಲ್ಲದೆ ಪೋಷಕರು ಅನಕ್ಷರಸ್ಥರಾಗಿದ್ದರಿಂದ ತಮ್ಮ ಮಕ್ಕಳಾದರೂ ಶಿಕ್ಷಿತರಾಗಲಿ ಎಂಬ ಉದ್ದೇಶದಿಂದ ಮತ್ತು ಶಿಕ್ಷಣ ಪಡೆದರೆ ಮೀಸಲಾತಿ ಸೌಲಭ್ಯದಿಂದಲಾದರೂ ಸರ್ಕಾರಿ ನೌಕರಿ ಸಿಗಬಹುದೆಂಬ ಆಶಾದಾಯಕ ಮನೋಭಾವನೆಯುನ್ನು ಹೊಂದಿರುವರು.

ಯಾವುದೇ ಬುಡಕಟ್ಟು ಸಮುದಾಯಗಳು ತಮ್ಮ ವೃತ್ತಿ ಅಥವಾ ಕುಲಕಸಬಿನೊಂದಿಗೆ ತಮ್ಮದೇಯಾದ ಆರ್ಥಿಕ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತವೆ. ಹಾಗೆಯೇ ಮೇದ ಮತ್ತು

ಬೇಡ ಬುಡಕಟ್ಟು ಸಮುದಾಯಗಳು ಮೂಲದಲ್ಲಿ ತಮ್ಮದೆಯಾದ ಕುಲಕಸಬನ್ನು ಹೊಂದಿದ್ದವು. ಮೇದ ಸಮುದಾಯದಲ್ಲಿ ಇನ್ನೂ ಆ ಕುಲಕಸುಬು ಇದೆ. ಆದರೆ ಬೇಡ ಸಮುದಾಯದ ಕುಲಕಸುಬು ಬೇಟೆ ಕೇವಲ ಆಚರಣೆಯಾಗಿ ಉಳಿದಿದೆ. ಇಂದು ಈ ಎರಡು ಸಮುದಾಯಗಳು ಕುಲಕಸಬನ್ನೇ ಆಧರಿಸಿ ಬದುಕು ಸಾಗಿಸುತ್ತಿಲ್ಲ. ಬೇರೆ ಬೇರೆ ಕೆಲಸ ಕಾರ್ಯಗಳನ್ನು ಆಧರಿಸಿ ಬದುಕು ಸಾಗಿಸುತ್ತಿವೆ. ಮೇದರು ನಗರ ಪ್ರದೇಶಗಳಲ್ಲಿ ವಾಸಿಸಿದರೂ ಕೂಡ ತಮ್ಮ ಕುಲಕಸುಬು ಬಿಡದೆ ಅದರ ಜೊತೆಯಲ್ಲಿಯೇ ಇತರ ಉದ್ಯೋಗಗಳನ್ನು, ವ್ಯಾಪಾರಗಳನ್ನು ಮಾಡುವರು ಗ್ರಾಮಗಳಲ್ಲಿ ಇವರು ವಾಸ ಮಾಡುವುದು ತುಂಬಾ ಕಡಿಮೆ. ಆದರೆ ಬೇಡರು ಗ್ರಾಮವಾಸಿಗಳಾಗಿದ್ದಾರೆ. ಇವರಲ್ಲಿ ಕೃಷಿಯನ್ನು, ಕೃಷಿ ಕೂಲಿಯನ್ನು ಆಧರಿಸಿ ಬದುಕು ಸಾಗಿಸುವವರು ಅಧಿಕ ಪ್ರಮಾಣದಲ್ಲಿ ಕಂಡುಬರುತ್ತಾರೆ. ಇವರಲ್ಲಿ ಶಿಕ್ಷಿತರು, ಸರ್ಕಾರಿ ನೌಕರಿಯನ್ನು ಪಡೆದವರು ನಗರಗಳಲ್ಲಿ ವಾಸಮಾಡುವರು. ಬೇಡರು  ಕೃಷಿಯನ್ನು ಆಧರಿಸಿ ಜೀವನ ಸಾಗಿಸುವ  ನೀರಾವರಿ ಸೌಲಭ್ಯಗಳಿಂದ ಇವತ್ತು ಹೆಚ್ಚು ಹೆಚ್ಚು ಫಸಲು ತೆಗೆಯುತ್ತಿರುವರು ಅಲ್ಲದೆ ಕೃಷಿ ಕೂಲಿ ಮಾಡುವವರಿಗೂ ಕೆಲವು ಸಂದರ್ಭಗಳಲ್ಲಿ ಹೆಚ್ಚು ಕೆಲಸಗಳು ದೊರೆಯುವವು. ಇವರಿಗೆ ಬೇಡಿಕೆ ತುಂಬಾ ಇರುವುದಕ್ಕಾಗಿ ಹೆಚ್ಚು ಕೂಲಿ ಪಡೆಯುವುದರಿಂದ ಇವರ ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದರೂ ಇಂದೂ ತಂತ್ರಜ್ಞಾನದ ಪ್ರತಿನಿಧಿಯಂತಿರುವ ಯಂತ್ರಗಳು ಈ ಕ್ಷೇತ್ರಗಳನ್ನೂ ವಶಪಡಿಸಿಕೊಂಡಿವೆ. ಇವುಗಳನ್ನು ಕೇವಲ ಜಮೀನ್ದಾರಿ ರೈತರು ಬಳಸುತ್ತಿದ್ದಾರೆ. ಇದರಿಂದ ಕೃಷಿಕಾರ್ಮಿಕರಿಗೆ, ಕೃಷಿ ಕೂಲಿಯು ದೊರೆಯುತ್ತಿಲ್ಲ. ಅಲ್ಲದೆ ಸಣ್ಣ ಸಣ್ಣ ಭೂ ಹಿಡುವಳಿಯನ್ನು ಹೊಂದಿದ ಬೇಡ ಸಮುದಾಯದ ರೈತರು ಇಂತಹ ಯಂತ್ರಗಳ ಬಳಸಲು ಅಸಾಧ್ಯವಾಗಿದೆ. ಆದರೆ ಮೇದ ಸಮುದಾಯದ ಕುಲಕಸುಬು ಇಂದು ಹಲವಾರು ಸವಾಲುಗಳು ಎದುರಿಸಬೇಕಾಗಿರುವುದರಿಂದ, ಇವರು ಬೇರೆ ಬೇರೆ ಉದ್ಯೋಗಗಳು ಸಣ್ಣ ಸಣ್ಣ ವ್ಯಾಪಾರಗಳನ್ನು ಅಂದರೆ ದಿನಗೂಲಿ, ಸರ್ಕಾರಿ ಅಥವಾ ಖಾಸಗಿ ಸಂಸ್ಥೆಗಳಲ್ಲಿ ಪಿವನ್, ಅಟೆಂಡರ್, ಅಲ್ಲದೆ ಚಾಲಕರಾಗಿ ಮತ್ತು ತರಕಾರಿ ವ್ಯಾಪಾರ, ಹಣ್ಣಿನ ವ್ಯಾಪಾರ, ಮಿಠಾಯಿ ವ್ಯಾಪಾರದಂತಹ ಸಣ್ಣ ಸಣ್ಣ ವ್ಯಾಪಾರ ಮಾಡುತ್ತಿರುವವರು. ಒಟ್ಟಾರೆಯಾಗಿ ಇವರು ಸ್ಥಿತಿಯಲ್ಲಿ ತುಂಬಾ ಬಡವರಾಗಿರುವರು. ಈ ಸಮುದಾಯಗಳು ಜಮೀನ್ದಾರರು, ಮೇಲ್ಜಾತಿಯವರು, ಶ್ರೀಮಂತರಲ್ಲಿ ತಮ್ಮ ಅಗತ್ಯತೆಗಾಗಿ ಸಾಲ ಮಾಡುತ್ತಿದ್ದರು. ಇಂದು ಇವುಗಳ ಸ್ಥಾನದಲ್ಲಿ ಲೇವಾದೇವಿ ಸಂಸ್ಥೆಗಳು, ಬ್ಯಾಂಕ್‌ಗಳು, ಲೀಜಿಂಗ್ ಫೈನಾನ್ಸ್‌ಗಳು ಹುಟ್ಟಿಕೊಂಡಿವೆ. ಇವುಗಳು ಈ ಸಮುದಾಯಗಳ ಜನರ ವಸ್ತುಗಳನ್ನು, ಆಭರಣಗಳನ್ನು ಆಸ್ತಿಪತ್ರಗಳನ್ನು ಅಡವು ಇಟ್ಟುಕೊಂಡು ಸಾಲಕೊಡುವವು. ಸರ್ಕಾರದ ಕೆಲವು ಇಲಾಖೆಗಳು, ಸರ್ಕಾರೇತರ ಸಂಸ್ಥೆಗಳು ಇವರಿಗೆ ಸಾಲವನ್ನು ನೀಡುತ್ತಿವೆ. ಈ ಸಂಸ್ಥೆಗಳು ವೃತ್ತಿ ಉಪಕರಣಗಳನ್ನು ಕೊಂಡುಕೊಳ್ಳಲು,

ವ್ಯಾಪಾರಗಳನ್ನು ಮಾಡಲು ಸಾಲ ನೀಡುವವು. ಆದರೆ ಇವರು ಈ ಸಾಲದ ಹಣವನ್ನು ಬೇರೆ ಬೇರೆ ಉದ್ದೇಶಗಳಿಗೆ ಬಳಸುವರು. ಸರ್ಕಾರದ ಇಲಾಖೆಗಳು ಇವರ ವೃತ್ತಿಗೆ ಸಂಬಂಧಿಸಿದ ಉಪಕರಣಗಳನ್ನು ಸಬ್ಸಿಡಿಯಲ್ಲಿ ನೀಡುವರು. ಇದರಿಂದ ಇವರು ವೃತ್ತಿಯನ್ನು ಮಾಡಲು ತುಂಬಾ ಸಹಕಾರಿಯಾಗಿವೆ. ಆದರೂ ಸಹ ಇವರು ಬಡತನದಿಂದ ಮೇಲೆ ಬರಲು ಆಗುತ್ತಿಲ್ಲ.

ಈ ಸಮುದಾಯಗಳಲ್ಲಿ ಶಿಕ್ಷಣ ವ್ಯವಸ್ಥೆಯ ದೋಷದಿಂದ ನಿರುದ್ಯೋಗಿಗಳು, ಅರೆ ಉದ್ಯೋಗಿಗಳು ಹೆಚ್ಚಾಗಿ ಕಂಡುಬರುತ್ತಾರೆ. ಇವರು ಉದ್ಯೋಗಗಳನ್ನು ಪಡೆಯಲು ಹಲವಾರು ಅರ್ಹತೆಗಳು, ಸಾಮರ್ಥ್ಯಗಳು ನಿಗಧಿಯಾಗಿರುತ್ತವೆ. ಆದ್ದರಿಂದ ಇವರ ಶೈಕ್ಷಣಿಕೆ ಅರ್ಹತೆಗೆ ತಕ್ಕ ಉದ್ಯೋಗಗಳು ದೊರೆಯುದರಿಂದ ಮೂಲ ನೆಲೆಗೆ ಬಂದು ನಿರುದ್ಯೋಗಿಯಾಗಿ ತಿರುಗಬೇಕಾದ ಪರಿಸ್ಥಿತಿ ಈ ಸಮುದಾಯಗಳಲ್ಲಿದೆ. ಇದರ ಪರಿಣಾಮವು ಇಡೀ ಕೌಟುಂಬಿಕ ವ್ಯವಸ್ಥೆಯ ಮೇಲೆ ಪ್ರಭಾವ ಬೀರುವುದು.

ಮೊದಲು ಬೇಡರು ಗುಡಿಸಲು ಚಪ್ಪರದಲ್ಲಿ ವಾಸಿಸುತ್ತಿದ್ದರು. ಮೇದರು ಬಿದಿರಿನ ಮನೆಗಳಲ್ಲಿ ವಾಸಿಸುತ್ತಿದ್ದರು. ಆದರೆ ಇಂದು ಕಲ್ಲಿನ ಮನೆಗಳು, ಆರ್.ಸಿ.ಸಿ. ಮನೆಗಳನ್ನು ಕಟ್ಟಿಕೊಂಡು ಜೀವನ ಸಾಗಿಸುವರು. ಅಲ್ಲದೆ ಸರ್ಕಾರದ ಇಂದಿರಾ ಅವಾಸ ಯೋಜನೆ, ಅಂಬೇಡ್ಕರ ವಾಲ್ಮೀಕಿ ಆವಾಸ ಯೋಜನೆಗಳಿಂದ ಸೌಲಭ್ಯದ ಲಾಭಪಡೆದಿದ್ದಾರೆ.

ಈ ಸಮುದಾಯಗಳ ಕೃಷಿ ಕೂಲಿ, ದಿನಗೂಲಿಗಳ ಸ್ತ್ರೀ–ಪುರುಷರ ಕೂಲಿಯಲ್ಲಿ ತಾರತಮ್ಯವಿದೆ. ಮಹಿಳೆಯರು ಮನೆಗೆಲಸಗಳಲ್ಲಿದೆ. ಉತ್ಪಾದನಾ ದುಡಿಮೆಗಳಲ್ಲಿ ತೊಡಗಿದ್ದಾರೆ. ಇದರಿಂದ ಸ್ತ್ರೀಯ ಶ್ರಮವು ಅಧಿಕವಾಗಿರುವುದು. ಇಬ್ಬರ ದುಡಿಮೆಯಿಂದ ಆದಾಯ ಬರುತ್ತದೆ. ಆದರೆ ಗಂಡಸರು ಹಲವಾರು ದುಶ್ಚಟಗಳಿಗೆ ಬಲಿಯಾಗಿದ್ದಾರೆ. ಅಂದರೆ ಕುಡಿತ ಜೂಜುಗಳಂತಹ ದುಶ್ಚಟಗಳಿಂದ ಇವರು ದುಡಿದ ಕೂಲಿ ಅದಕ್ಕೆ ಸರಿಯಾಗುವುದು. ಅಲ್ಲದೆ ಸಾಲ ಮಾಡುವರು. ಈ ದುಶ್ಚಟಗಳು, ಅವರು ಆಯಾಸವನ್ನು ಕಡಿಮೆ ಮಾಡಿಕೊಳ್ಳಲು ಬೆಳೆದವುಗಳಾಗಿವೆ. ಅವುಗಳಿಂದ ಇವರ ಆರೋಗ್ಯ ಹದಗೆಟ್ಟು ದುಡಿಯುವ ಸಾಮರ್ಥ್ಯ ಕಡಿಮೆಯಾಗುವುದು. ಕೆಲವರು ಆಧುನಿಕ ಮೋಜಿನಿಂದ ಇಂತಹ ದುಶ್ಚಟಗಳನ್ನು ಅಭ್ಯಾಸಮಾಡಿಕೊಳ್ಳುವರು.

ಒಟ್ಟಾರೆಯಾಗಿ ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಸಮಾಜವು ಸ್ಥಿತ್ಯಂತರಗೊಂಡಿದೆ. ಇದು ಬುಡಕಟ್ಟುಗಳ ಸ್ಥಿತ್ಯಂತರಕ್ಕೂ ಕಾರಣವಾಗಿದೆ. ಇದರ ಪರಿಣಾಮವಾಗಿ ಜಾಗತೀಕರಣವು ಸಮುದಾಯಗಳು ತಮ್ಮ ಕುಲಕಸುಬನ್ನೆ ಆಧರಿಸಿ ಜೀವನ ಸಾಗಿಸಬೇಕಾದ ಅನಿವಾರ್ಯತೆಯಿಂದ ದೂರಮಾಡಿ ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡಲು ದುಡಿಮೆಯ ಅವಕಾಶಗಳನ್ನು

ಒದಗಿಸಿದೆ. ಇದು ಕಡಿಮೆ ಸಂಬಳಕ್ಕೆ ಹೆಚ್ಚು ದುಡಿಯಬೇಕಾದ ಅನಿವಾರ್ಯತೆಯನ್ನುಂಟು ಮಾಡಿದೆ. ಶೈಕ್ಷಣಿಕ ಅರ್ಹತೆ, ಶೈಕ್ಷಣಿಕ ಗುಣಮಟ್ಟ, ಸಾಮರ್ಥ್ಯಗಳ ಹೆಸರಲ್ಲಿ ಮತ್ತು ತಂತ್ರಜ್ಞಾನಗಳ ಬಳಕೆಯಿಂದ ನಿರುದ್ಯೋಗವನ್ನು ಸೃಷ್ಟಿಸಿದೆ. ಇದು ಕೈಗಾರೀಕರಣ ಮತ್ತು ನಾಗರೀಕರಣದಿಂದ ಈ ಸಮುದಾಯಗಳನ್ನು ಒಕ್ಕಲೆಬ್ಬಿಸಿ ಕೊಳಚೆ ಪ್ರದೇಶಗಳಲ್ಲಿ ನೆಲೆಸುವಂತೆ ಮಾಡಿದೆ. ಇದರಿಂದ ಇವರ ಆರೋಗ್ಯದ ಮೇಲು ಪರಿಣಾಮ ಬೀರಿದೆ.

ಜಾಗತೀಕರಣದಿಂದ ಬುಡಕಟ್ಟು ಸಮುದಾಯಗಳು ತಮ್ಮ ಮೂಲ ಸಂಪ್ರದಾಯ, ಆಚರಣೆ, ಆಚಾರ, ವಿಚಾರಗಳು, ನಂಬಿಕೆಗಳು, ಕರಕುಶಲಕಲೆ, ನೃತ್ಯ, ಇತ್ಯಾದಿಗಳಿಗೆ ಪರ್ಯಾಯವಾಗಿ ಆಧುನಿಕ ಮೌಲ್ಯಗಳನ್ನು ಅಂತರ್ಗತ ಮಾಡಿಕೊಳ್ಳಬೇಕಾದ ಅನಿವಾರ್ಯತೆಯಿಂದ, ಇವುಗಳು ವಿನಾಶದ ಹಂಚಿನಲ್ಲಿವೆ. ಇವರು ಬೆಳೆಸಿಕೊಳ್ಳುವ ಆಧುನಿಕ ಮೌಲ್ಯಗಳು ಆಧುನಿಕ ಸಮಾಜ ಜನರ ಆಧುನಿಕ ಮೌಲ್ಯಗಳಷ್ಟು ಪರಿಪಕ್ವವಾಗದೆ, ಇವರಲ್ಲಿ ಕೆಳಮಟ್ಟದ ಮನೋಭಾವವನ್ನು ಬೆಳೆಯುತ್ತದೆ. ಈ ಸಮುದಾಯದಲ್ಲಿ ಇವುಗಳನ್ನು ಉಳಿಸಿಕೊಳ್ಳಬೇಕಾದ ಮನೋಭಾವದವರು ಸಮಸ್ಯೆಗಳು ಮತ್ತು ಸವಾಲುಗಳನ್ನು ಎದುರಿಸುತ್ತಿದ್ದಾರೆ. ಕೊನೆಯಲ್ಲಿ ಅವರು ಕೂಡ ಜಾಗತೀಕರಣದ ಆಧುನಿಕತೆಯಲ್ಲಿ ಅಂತರ್ಗತವಾಗಿ ಬಿಡುತ್ತಾರೆ.

ಜಾಗತೀಕರಣದ ಕೈಗಾರೀಕಿಕರಣ, ನಗರೀಕರಣಗಳಿಂದ ಎಲ್ಲಾ ಜಾತಿ, ಧರ್ಮ, ಪ್ರದೇಶ, ಲಿಂಗದವರು ಕೂಡಿ ದುಡಿಯಬೇಕಾದ ಅನಿವಾರ್ಯತೆ ಉಂಟಾಗುವದರಿಂದ ಜಾತ್ಯಾತೀತ ಮನೋಭಾವ ಬೆಳೆಸುತ್ತದೆ. ಇದರಿಂದ ಜಾತಿ ವ್ಯವಸ್ಥೆಯಲ್ಲಿಯ ಆಸ್ಪೃಶ್ಯತೆ, ಜಾತಿಯ ನಿರ್ಬಂಧಗಳಲ್ಲಿ ಜಾತಿ ಮಧ್ಯದ ಸಂಬಂಧದಲ್ಲಿಯೆ ಅಂತರವನ್ನು ಕಡಿಮೆ ಮಾಡಿದೆ. ಆದರೆ ಜಾಗತೀಕರಣವು ಜಾತಿ ವ್ಯವಸ್ಥೆಗೆ ಪರ್ಯಾಯವಾಗಿ ವರ್ಗ ವ್ಯವಸ್ಥೆಯನ್ನು ಜಾತಿಜಾತಿಗಳಲ್ಲಿಯೇ ಬೆಳೆಸಿದೆ.

**ಅಡಿಟಿಪ್ಪಣಿಗಳು:**

೧. ಮೊಗ್ಗಳ್ಳಿ ಗಣೇಶ, ದಲಿತರು ಮತ್ತು ಜಾಗೇತಕರಣ. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೯ ಪು.೧೨.

೨. ಪ್ರಭಾಕರ್ ಎ.ಎಸ್.ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦ ಪು. ೩೬

೩. ಮೊಗ್ಗಳ್ಳಿ ಗಣೇಶ, ದಲಿತರು ಮತ್ತು ಜಾಗತೀಕರಣ ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ. ೧೯೯೯ ಪು.೧೪.

೪. ಪ್ರಭಾಕರ್.ಎ.ಎಸ್. ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೧. ಪು.೧

೫. ಅದೇ ಪು ೪೦

೬. ಅದೇ ಪು ೪೦-೪೧

೭. ಅದೇ ಪುಟ. ೪೧.

## ಸಮಾರೋಪ

ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಸುರಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳ ಸಮಾಜೋ-ಆರ್ಥಿಕ ಸ್ಥಿತಿಗತಿಗಳನ್ನು ಈ ಪ್ರಬಂಧದಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಬೇಡರು ಎಂದರೆ ಯಾರು? ಮೇದರು ಎಂದರೆ ಯಾರು? ಎಂಬ ಪ್ರಶ್ನೆಗಳಿಗೆ ಅನೇಕ ಹಿರಿಯ ವಿದ್ವಾಂಸರು ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಬೇಡ ಮತ್ತು ಮೇದ ಎಂಬ ಹೆಸರುಗಳನ್ನು ವ್ಯುತ್ಪತ್ತಿ ಶಾಸ್ತ್ರ ವಿಧಾನದ ಮೂಲಕ ಅರ್ಥೈಸಲು ಕೆಲವರು ಯತ್ನಿಸಿದರೆ, ಕೆಲವರು ಬೇಡರ ಸೃಷ್ಟಿಪುರಾಣ ಹಿನ್ನಲೆ, ಚಾರಿತ್ರಿಕ ಹಿನ್ನಲೆಯಿಂದ ಮತ್ತು ಮೇದರ ಸೃಷ್ಟಿಪುರಾಣದ ಹಿನ್ನಲೆ, ಚಾರಿತ್ರಿಕ ಹಿನ್ನಲೆಯಿಂದ ಈ ಸಮುದಾಯಗಳ ಚಾರಿತ್ರಿಕತೆಯನ್ನು ವಿವರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಸುರುಪುರ ತಾಲೂಕಿನ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳಲ್ಲದೆ ಅಲೆಮಾರಿ ಬುಡಕಟ್ಟು ಸಮುದಾಯಗಳಾದ ಸುಡಗಾಡಸಿದ್ದರು, ಬುಡ್ಗಜಂಗಮ, ಬೈಲಪತ್ತಾರ, ಕೊರಮ, ಸಿಂಧೊಳ್ಳ ಇತ್ಯಾದಿ ಸಮುದಾಯಗಳಿವೆ. ಆದರೆ ಸರ್ಕಾರದ ಪರಿಶಿಷ್ಟ ವರ್ಗದ ಪಟ್ಟಿಯಲ್ಲಿ ಬೇಡ ಮತ್ತು ಮೇದ ಬುಡಕಟ್ಟು ಸಮುದಾಯಗಳು ಮಾತ್ರ ಸೇರಿವೆ. ಬೇಡ ಮತ್ತು ಮೇದ ಸಮುದಾಯಗಳನ್ನು ಬುಡಕಟ್ಟು ಸಮುದಾಯಗಳೆಂದು ಪರಿಗಣಿಸಬಹುದಾದಷ್ಟು ದಟ್ಟ ಬುಡಕಟ್ಟು ಲಕ್ಷಣಗಳನ್ನು ಈ ಸಮುದಾಯಗಳು ಹೊಂದಿಲ್ಲ. ಇವು ಭಾರತದ ಜಾತಿ ವ್ಯವಸ್ಥೆಯಲ್ಲಿ ಸೇರಿ ಹೋಗಿದ್ದರೂ, ಇವುಗಳ ಆಚರಣೆ, ಪದ್ಧತಿ, ರೂಢಿ, ಸಂಪ್ರದಾಯಗಳಲ್ಲಿ, ಬುಡಕಟ್ಟು ಲಕ್ಷಣಗಳು ಕಂಡು ಬರುತ್ತವೆ.

ಮೇದ ಸಮುದಾಯದವರು ಹೆಚ್ಚಾಗಿ ನಗರ ಪ್ರದೇಶಗಳಲ್ಲಿ ಪಟ್ಟಣ ಪ್ರದೇಶಗಳಲ್ಲಿ ಹಾಗೂ ಇವುಗಳಿಗೆ ಹತ್ತಿರವಿರುವ ಗ್ರಾಮಗಳಲ್ಲಿ ಕೆಲವೇ ಕುಟುಂಬಗಳು ವಾಸವಾಗಿವೆ. ಈ ಸಮುದಾಯವು ಸುಮಾರು ವರ್ಷಗಳ ಹಿಂದೆಯೇ ಸುರಪುರದಿಂದ ಬಂದು ಇಂತಹ ಹಳ್ಳಿಗಳಲ್ಲಿ ಮತ್ತು ಪಟ್ಟಣದಲ್ಲಿ ಶಾಶ್ವತವಾಗಿ ನೆಲೆಯೂರಿವೆ. ಆದರೆ ಬೇಡರು ಹೆಚ್ಚಾಗಿ ಗ್ರಾಮವಾಸಿಗಳಾಗಿದ್ದಾರೆ. ಶಿಕ್ಷಣ ಪಡೆದವರು, ವ್ಯಾಪಾರಸ್ಥರು, ಸರ್ಕಾರಿ, ಖಾಸಗಿ, ಸರ್ಕಾರೇತರ ಸಂಸ್ಥೆಗಳಲ್ಲಿ ನೌಕರಿ ಮಾಡುವವರು ಮಾತ್ರ ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ನೆಲೆಸಿದ್ದಾರೆ.

ಈ ಸಮುದಾಯಗಳು ತಮ್ಮ ಕುಲಕಸುಬನ್ನು ಬಿಟ್ಟು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಬೇಡರು ಬೇಟೆಯನ್ನು ಕೇವಲ ಒಂದು ಆಚರಣೆಯನ್ನಾಗಿ ಮಾಡಿಕೊಂಡಿದ್ದಾರೆ. ಇವರಿಗೆ ಕೃಷಿಯೇ ಕುಲಕಸುಬಾಗಿದೆ. ಆದರೆ ಮೇದರಲ್ಲಿ ಕುಲಕಸಬು ಒಂದು ಕಸುಬಾಗಿ ಉಳಿದುಕೊಂಡಿದ್ದರೂ, ಈ ಸಮುದಾಯದವರು ಬೇರೆ ಬೇರೆ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಈ ಕುಲಕಸುಬಿನಿಂದ ಲಾಭವಿಲ್ಲ ಎನ್ನುವುದೇ ಇವರ ಕೊರಗು ಆಗಿದೆ.

ಈ ಸಮುದಾಯಗಳು ಮುಖ್ಯವಾಹಿನಿ ಎಂದು ಕರೆಯಲ್ಪಡುವ ಸಮಾಜದಿಂದ ದೂರ ಉಳಿಯುದೇ, ಹತ್ತಿರದಲ್ಲಿವೆ ಅಥವಾ ಸಮೀಪಿಸಿಕೊಳ್ಳುತ್ತಿವೆ ಎಂದರೆ ತಪ್ಪಾಗಲಿಕ್ಕಿಲ್ಲ. ಈ ಸಮುದಾಯಗಳ ಪಾರಂಪರಿಕ ಉಡುಗೆ ತೊಡುಗೆ, ಆಭರಣಗಳು, ಮರೆಯಾಗಿ ಮುಖ್ಯವಾಹಿನಿಯ ಸಾಮಾಜಿಕ ಮೌಲ್ಯಗಳು ಅಂತರ್ಗತವಾಗಿವೆ. ಈ ಕಾರಣದಿಂದಾಗಿ ಬೇಡ, ಮೇದ ಸಮುದಾಯಗಳ ಸಾಮಾಜಿಕ ಸಂರಚನೆ, ಆರ್ಥಿಕ ರಾಜಕೀಯ ಚಟುವಟಿಕೆಗಳನ್ನು ಪ್ರತ್ಯೇಕವಾಗಿ ನೋಡಲು ಬರುವುದಿಲ್ಲ. ಮುಖ್ಯವಾಹಿನಿ ಸಮಾಜದ ಜಾತಿ ಶ್ರೇಣಿಕರಣ ವ್ಯವಸ್ಥೆಯಲ್ಲಿ ಈ ಸಮುದಾಯಗಳು ಸಮ್ಮಿಲನಗೊಂಡಿವೆ. ಆದ್ದರಿಂದ ಜಾತಿ ವ್ಯವಸ್ಥೆ ಪರಿಣಾಮ ಮತ್ತು ಪ್ರಭಾವಗಳು ಈ ಸಮುದಾಯಗಳ ಮೇಲಾಗುತ್ತವೆ.

ಕಾರಣ ಈ ಸಮುದಾಯದ ಸಾಮಾಜಿಕ ವ್ಯವಸ್ಥೆಯನ್ನು ಮುಖ್ಯವಾಹಿನಿ ಸಮಾಜದ ವ್ಯವಸ್ಥೆಯೊಂದಿಗೆ ನೋಡಬೇಕು. ಏಕೆಂದರೆ ಮುಖ್ಯವಾಹಿನಿ ಸಮಾಜದಲ್ಲಿಯ ಜಾತಿ ಶ್ರೇಣಿಕರಣ ವ್ಯವಸ್ಥೆಯಲ್ಲಿ ಈ ಸಮುದಾಯಗಳು ಸಮ್ಮಿಲನಗೊಂಡಿರುವದರಿಂದ ಜಾತಿ ವ್ಯವಸ್ಥೆಯ ಪರಿಣಾಮ ಮತ್ತು ಪ್ರಭಾವಗಳು ಇವುಗಳ ಮೇಲೂ ಆಗುವುದು. ಕಾರಣ ಜಾತಿ ವ್ಯವಸ್ಥೆಯು ನಿರ್ಬಂಧಗಳ ಸಡಿಲಿಕೆ ಇವಗಳಿಗೂ ಅನ್ವಯವಾಗುವುದು. ಅದರಂತೆ ಮುಖ್ಯವಾಹಿನಿ ಸಮಾಜದ ಕೌಟುಂಬಿಕ ರಚನೆಯಲ್ಲಿ, ವೈವಾಹಿಕ ರಚನೆಯಲ್ಲಿ, ಸಾಮಾಜಿಕ ಸಂಬಂಧಗಳಲ್ಲಿ, ಸಾಮಾಜಿಕ ವರ್ತನೆಗಳಲ್ಲಿ ಇತ್ಯಾದಿ ವ್ಯವಸ್ಥೆಯಲ್ಲಿ ಬದಲಾವಣೆಯಾದರೆ ಈ ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಿಯು ಬದಲಾವಣೆಯಾಗುವುದು.

ಆದ್ದರಿಂದ ಜಾಗತೀಕರಣದ ಪರಿಣಾಮವಾಗಿ ಮುಖ್ಯವಾಹಿನಿ ಎಂದು ಕರೆಯುವ ಸಮಾಜದ ಸಾಮಾಜಿಕ ವ್ಯವಸ್ಥೆಯುಲ್ಲಿ ಬದಲಾವಣೆಯಾಗಿದೆ. ಪರಿಣಾಮವಾಗಿ ಬುಡಕಟ್ಟು ಸಮುದಾಯಗಳ ಸಾಮಾಜಿಕ ವ್ಯವಸ್ಥೆಯುಲ್ಲಿ ಬದಲಾವಣೆಯಾಗುತ್ತಿದೆ ಎಂಬುದು ಈ ಅಧ್ಯಯನದಿಂದ ಖಚಿತವಾಗುತ್ತದೆ.

ಜಾಗತೀಕರಣವು ಖಾಸಗೀಕರಣ, ಉದಾರಿಕರಣ ಮೂಲಕ ಜಾಗತೀಕ ಸಂಸ್ಥೆಗಳು ತೃತೀಯ ಜಗತ್ತಿನ ರಾಷ್ಟಗಳ ಆರ್ಥಿಕ ಕ್ಷೇತ್ರಗಳನ್ನು, ಮಾರುಕಟ್ಟೆಯ ವ್ಯವಸ್ಥೆಯನ್ನು ತನ್ನ

ಹತೋಟಿಯಲ್ಲಿಟ್ಟುಕೊಳ್ಳುದಲ್ಲದೇ ಜಾಗತೀಕ ಸಂಸ್ಥೆಗಳು ಹೂಡುವ ಬಂಡವಾಳವನ್ನು ಯಾವ ಕ್ಷೇತ್ರದಲ್ಲಿ ಹೂಡಬೇಕು ಎಂಬುದನ್ನು ಮಾರ್ಗದರ್ಶನ ಮಾಡುತ್ತವೆ. ಇದರ ಪರಿಣಾಮವಾಗಿ ಆರ್ಥಿಕ ಸಂಸ್ಥೆಗಳ ಉತ್ಪಾದನಾ ವಿಧಾನ, ಉತ್ಪದನಾ ಸಾಧನಗಳಲ್ಲಿ ಉತ್ಪಾದನಾ ಸಂಬಂಧಗಳಲ್ಲಿ ಬದಲಾವಣೆಯಾಗಿರುವುದು. ಜಾಗತೀಕರಣದ ಪರಿಣಾಮವಾಗಿ ಬುಡಕಟ್ಟುಗಳ ಕುಲಕಸುಬಗಳು ವಿನಾಶದ ಅಂಚಿನಲ್ಲಿವೆ. ಅಲ್ಲದೇ ಇವರು ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ಬೆಲೆ ಸಿಗುತ್ತಿಲ್ಲ. ಯಂತ್ರಗಳಿಂದ ಉತ್ಪಾದಿತ ವಸ್ತುಗಳು ನಯನಾಜೂಕಾಗಿರುತ್ತವೆ. ಇವುಗಳಿಗೆ ಈ ಸಮುದಾಯಗಳ ಉತ್ಪಾದಿತ ವಸ್ತುಗಳು ಸ್ಪರ್ಧೆಯಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ.

ಜಾಗತೀಕರಣದಿಂದ ತೀವ್ರ ಕೈಗಾರಿಕೀಕರಣ ನಗರೀಕರಣ ಪ್ರಕ್ರಿಯೆ ವೇಗವಾಗಿ ನಡೆದಿವೆ ಇದರಿಂದ ಸಾಮರ್ಥ್ಯ ಮತ್ತು ಅರ್ಹತೆ ಇದ್ದರೆ ಉನ್ನತ ಹುದ್ದೆಗಳನ್ನು, ಸ್ಥಾನಮಾನಗಳನ್ನು ಪಡೆಯಲು ಅವಕಾಶ ಸಿಗುತ್ತದೆ. ಅಲ್ಲದೆ ಇತರ ಹೊಸ ಹೊಸ ಉದ್ಯೋಗಗಳು ಮತ್ತು ಸಣ್ಣ ಸಣ್ಣ ವ್ಯಾಪಾರ ಮಾಡಲು ಅವಕಾಶಗಳು ದೊರೆಯುತ್ತಿವೆ. ಇಂತಹ ಅವಕಾಶಗಳಿಂದಾಗಿ ಆರ್ಥಿಕಾ ಸ್ವಾವಲಂಬನೆ ಉಂಟಾಗುವುದು. ಜಾತಿವ್ಯವಸ್ಥೆಗೆ ಬದಲಾಗಿ ವರ್ಗ ವ್ಯವಸ್ಥೆ ಹುಟ್ಟಿಕೊಳ್ಳುವುದು.

ಸಾಮಾಜಿಕ ಮತ್ತು ಆರ್ಥಿಕ ಅಂಶಗಳಲ್ಲಿಯ ಸ್ಥಿತ್ಯಂತರದಿಂದ ಆಚರಣೆಗಳು, ನಂಬಿಕೆಗಳು, ಮೌಲ್ಯಗಳು ಕ್ರಿಯಾವಿಧಿಗಳು ಸ್ಥಿತ್ಯಂತರಗೊಳಲ್ಪಡುವವು. ಬೇಡ ಮತ್ತು ಮೇದ ಸಮುದಾಯಗಳ ಈ ಅಂಶಗಳು ಜಾರಿಯಲ್ಲಿದ್ದರೂ ಕೂಡ ಇವುಗಳ ರೂಪದಲ್ಲಿ ಆಚರಿಸುವ ವಿಧಾನದಲ್ಲಿಯಾದರು ಬದಲಾವಣೆಯಾಗಿದೆ. ಅಲ್ಲದೆ ತಮ್ಮ ಕುಲ ದೇವರನಲ್ಲದೆ ಬೇರೆ ಬೇರೆ ದೇವರುಗಳನ್ನು ಪೂಜಿಸುತ್ತಿರುವರು ಅಲ್ಲದೆ ಪೂಜಾ ವಿಧಾನವು ಬದಲಾಗಿದೆ. ಪೂಜಿಸುವ ದೇವರುಗಳಿಂದ ಸ್ಥಾನಮಾನಗಳು ಪ್ರಾಪ್ತವಾಗಿವೆ. ಇದರಿಂದ ಈ ಸಮುದಾಯಗಳ ಧಾರ್ಮಿಕ ಬದುಕು ಸ್ಥಿತ್ಯಂತರವಾಗಿದೆ.

ಆರ್ಥಿಕ ವ್ಯವಸ್ಥೆ ಇತರ ವ್ಯವಸ್ಥೆಗಳ ಮೇಲೆ ಪ್ರಭಾವ ಬೀರುತ್ತದೆ. ಕಾರಣ ರಾಜಕೀಯ ಪಾಲ್ಗೊಳ್ಳುವಿಕೆ, ರಾಜಕೀಯ ಅಧಿಕಾರ, ರಾಜಕೀಯ ಸಂಪರ್ಕ ಮತ್ತು ಸಂಬಂಧಗಳು, ಆರ್ಥಿಕತೆಯನ್ನು ಅವಲಂಬಿಸಿವೆ. ಬೇಡ ಮತ್ತು ಮೇದ ಸಮುದಾಯಗಳು ಆರ್ಥಿಕವಾಗಿ ದುರ್ಬಲವಾಗಿರುವುದರಿಂದ ಇವರ ರಾಜಕೀಯ ಪಾಲ್ಗೊಳ್ಳುವಿಕೆ, ರಾಜಕೀಯ ಅಧಿಕಾರಗಳು ದೊರೆತರು ಅವು ನಾಮಮಾತ್ರವಾಗಿವೆ. ಆದ್ದರಿಂದ ಈ ಸಮುದಾಯಗಳು ರಾಜಕೀಯ ಸ್ಥಿತಿಗತಿಯಲ್ಲಿ ಬದಲಾವಣೆಯಾಗಿದೆ. ಈ ಸಮುದಾಯಗಳು ಈ ಎಲ್ಲಾ ಅಂಶಗಳಲ್ಲಿಯು ಬದಲಾವಣೆಯಿಂದ ಶಿಕ್ಷಣದ ಸ್ಥಿತಿಗತಿಯು ಬದಲಾವಣೆಯಾಗಿದೆ. ಖಾಸಗೀಕರಣದಿಂದ ಶಿಕ್ಷಣವು ಈ ಸಮುದಾಯಗಳಿಗೆ ಸಿಗುತ್ತಿಲ್ಲ.

ಒಟ್ಟಾರೆಯಾಗಿ ಈ ಸಮುದಾಯಗಳು ಕಾಲಮಾನಕ್ಕೆ ಅನುಗುಣವಾಗಿ ಹೊಂದಾಣಿಕೆ ಅಥವಾ ವಿಸ್ತರಿಸಿಕೊಳ್ಳುವುದಕ್ಕಾಗಿಯಾದರೂ ಸ್ಥಿತ್ಯಂತರಕ್ಕೆ ಒಳಪಡಬೇಕಾದ ಅನಿವಾರ್ಯ ಉಂಟಾಗಿದೆ. ಯಾವುದೇ ಬದಲಾವಣೆಗೆ ಆರ್ಥಿಕತೆ ಮತ್ತು ರಾಜಕೀಯವು ಕಾರಣವಾಗಿದೆ ಎಂಬುದನ್ನು ಈ ಅಧ್ಯಯನದಿಂದ ಖಚಿತಪಡಿಸಿಕೊಳ್ಳಲಾಗಿದೆ.

**ಅಧ್ಯಯನದ ಫಲಿತಗಳು :**

ಕ್ಷೇತ್ರ ಕಾರ್ಯ ಮತ್ತು ವ್ಯಕ್ತಿ ಅಧ್ಯಯನ ಮಾಡುವದರಿಂದ ಅಧ್ಯಯಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿದೆ. ಅಂತಹ ಕೆಲವು ಅಭಿಪ್ರಾಯಗಳು ಈ ಕೆಳಗೆ ನೀಡುತ್ತಿದ್ದೇನೆ.

೧. ಬೇಡ ಮತ್ತು ಮೇದ ಸಮುದಾಯಗಳಲ್ಲಿ ವಿಶಿಷ್ಟ ಬುಡಕಟ್ಟು ಲಕ್ಷಣಗಳು ಮರೆಯಾಗಿ ಜಾತಿಯ ಸ್ವರೂಪ ಪಡೆದುಕೊಂಡಿವೆ. ಇವುಗಳು ಜಾತಿ ಶ್ರೇಣಿ ವ್ಯವಸ್ಥೆಯಲ್ಲಿ ಕೆಳಸ್ಥಾನದಲ್ಲಿವೆ.

೨. ಈ ಸಮುದಾಯಗಳು ಆಧುನಿಕಗೊಂಡರೂ ತಮ್ಮ ಮೂಲ ಆಚರಣೆ, ಕ್ರಿಯಾವಿಧಿಗಳು, ನಂಬಿಕೆಗಳು ಆಚರಿಸುತ್ತಿದ್ದಾರೆ. ಆದರೆ ಅವುಗಳ ಆಚರಣೆಯ ವಿಧಿವಿಧಾನಗಳು ಸ್ವರೂಪದಲ್ಲಿ ಬದಲಾವಣೆಯಾಗಿದೆ.

೩. ಬೇಡರಲ್ಲಿ ಕೃಷಿಕೂಲಿ, ದಿನಗೂಲಿಯಾಗಿ ದುಡಿಯುವವರ ಸಂಖ್ಯೆ ಅಧಿಕವಾಗಿದೆ. ಆದರೆ ಮೇದರಲ್ಲಿ ತಮ್ಮ ಕುಲಕಸುಬಿಗಿಂತಲೂ ಹಣ್ಣಿನ ವ್ಯಾಪಾರ, ತರಕಾರಿ ವ್ಯಾಪಾರಿಗಳು ಅಂದರೆ ಸಣ್ಣ ವ್ಯಾಪಾರದಲ್ಲಿ ತೊಡಗಿರುವವರು ಅಧಿಕವಾಗಿದ್ದಾರೆ.

೪. ಮೇದ ಸಮುದಾಯದವರು ಹೆಚ್ಚಾಗಿ ನಗರವಾಸಿಗಳು, ಪಟ್ಟಣ ವಾಸಿಗಳಾಗಿದ್ದಾರೆ. ಆದರೆ ಬೇಡರು ಗ್ರಾಮಜೀವನವನ್ನು ನಡೆಸುತ್ತಿರುವರು.

೫. ಈ ಸಮುದಾಯಗಳು ಮೀಸಲಾತಿಯ ಮೂಲಕ ರಾಜಕೀಯ ಅಧಿಕಾರ ಪಡೆದರೂ, ಸ್ವತಂತ್ರವಾಗಿ ಅಧಿಕಾರ ಚಲಾಯಿಸುವ ಹಂತದಲ್ಲಿಲ್ಲ. ಈ ಅಧಿಕಾರ ನಾಮ ಮಾತ್ರವಾಗಿದೆ.

೬. ಇವರು ಶಿಕ್ಷಣ ಕೋರ್ಸ್ ಆಯ್ಕೆಯಲ್ಲಿ ಅಧಿಕ ಜನರು ಕಲಾ ವಿಭಾಗವನ್ನೆ ಆಯ್ಕೆ ಮಾಡಿಕೊಳ್ಳುವರು. ವೈದ್ಯಕೀಯ, ತಾಂತ್ರಿಕ ಶಿಕ್ಷಣವನ್ನು ಆಯ್ಕೆ ಮಾಡಿಕೊಳ್ಳುತ್ತಿಲ್ಲ.

೭. ವಿಜ್ಞಾನ ತಂತ್ರಜ್ಞಾನಗಳಿಂದ ಕೃಷಿಯಲ್ಲಿ ಯಂತ್ರಗಳನ್ನು ಬಳಸುತ್ತಿದ್ದಾರೆ. ಕೃಷಿಯನ್ನೇ ಅವಲಂಬಿಸಿದ ಬೇಡ ಸಮುದಾಯವು, ಸಣ್ಣ ಭೂಹಿಡುವಳಿಗಳಲ್ಲಿ ಯಂತ್ರಗಳ ಬಳಕೆ ಅಸಾಧ್ಯವಾಗಿದೆ. ಇವುಗಳು ಕೇವಲ ಭೂಮಾಲೀಕರು ಮಾತ್ರ ಬಳಸುವುದರಿಂದ ಕೃಷಿಕೂಲಿ ಮಾಡುವವರಿಗೆ ಕೆಲಸ ಸಿಗದಂತಾಗಿದೆ.

೮. ಪ್ಲಾಸ್ಟಿಕ್ ಮತ್ತು ಪೈಬರ್‌ನಿಂದ ತಯಾರಿಸಿದ ಬುಟ್ಟಿ, ಮರಗಳು ಇವರು ತಯಾರಿಸಿದ ಬಿದಿರಿನ ಬುಟ್ಟಿ, ಮರಗಳಿಗೆ ಸ್ಪರ್ಧೆಯಾಗಿ ನಿಂತಿವೆ. ಆದ್ದರಿಂದ ಕುಲಕಸುಬು ಅವನತಿಯ ಹಂಚಿನಲ್ಲಿ ಇದೆ. ಆದರೂ ಕೆಲವು ಆಚರಣೆಗಳಿಗೆ ಬಿದಿರಿನ ಬುಟ್ಟಿ ಮತ್ತು ಮರಗಳ ಬೇಕಾಗುವುದರಿಂದ ಇನ್ನು ಕುಲಕಸುಬು ಉಳಿದಿದೆ.

೯. ಇವರ ಚಾರಿತ್ರಿಕ ಮತ್ತು ಪೌರಾಣಿಕ ಹಿನ್ನೆಲೆಯನ್ನು ನೋಡಿದಾಗ ಇವರು ದಿನನಿತ್ಯ ದುಡಿದು ತಿನ್ನುವ ಶ್ರಮ ಜೀವಗಳಾಗಿರುವುದು ಕಂಡುಬರುತ್ತದೆ.

**ಅಧ್ಯಯನದ ಆಶಯಗಳು**

ಪ್ರಸ್ತುತ ಜಾಗತೀಕರಣ ಸಂದರ್ಭದಲ್ಲಿ ಬೇಡ ಮತ್ತು ಮೇದ ಸಮುದಾಯದ ಸಮಾಜೋ-ಆರ್ಥಿಕ ಸ್ಥಿತಿಗತಿಗಳ ಅಧ್ಯಯನದ ಕೆಲವು ಆಶಯುಗಳನ್ನು ಈ ಕೆಳಗೆ ನೀಡಲಾಗಿದೆ. ಈ ಆಶಯುಗಳು ನನ್ನ ಅಧ್ಯಯನದ ಭಾಗವಾಗಿ ಹೊರಹೊಮ್ಮಿದವುಗಳಾಗಿವೆ.

೧. ಇತರ ಮೇಲ್ಜಾತಿಗಳು ಬೇಡ ಮತ್ತು ಮೇದ ಸಮುದಾಯಗಳನ್ನು ತಮ್ಮ ಸಮಾನ ಎಂದು ಕಾಣುವಂತಾಗಬೇಕು.

೨. ಈ ಸಮುದಾಯಗಳಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಂತಕ್ಕೆ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚಾಗಿರುವುದು. ಆದರಲ್ಲೂ ಹೆಣ್ಣು ಮಕ್ಕಳ ಸಂಖ್ಯೆ ಜಾಸ್ತಿಯಾಗಿರುವುದು. ಪೋಷಕರಲ್ಲಿ ಮತ್ತು ಮಕ್ಕಳಲ್ಲಿ ಇದರ ಕುರಿತು ಜಾಗೃತಿ ಮೂಡಿಸಿದನ್ನು. ಕಡಿಮೇ ಮಾಡಬೇಕು.

೩. ಬೇಡ ಮತ್ತು ಮೇದ ಸಮುದಾಯಗಳಿಗೆ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ನಿರ್ಣಾಯಕ ಅಧಿಕಾರಗಳು ಲಭ್ಯವಾಗಬೇಕೆಂದರೆ, ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಈ ಸಮುದಾಯುಗಳು ಸ್ವಾವಲಂಬಿಯಾಗಬೇಕು.

೪. ಈ ಸಮುದಾಯಗಳಲ್ಲಿ ಮೂಢನಂಬಿಕೆ, ಕಂದಾಚಾರಗಳು, ಗೊಡ್ಡು ಸಂಪ್ರದಾಯಗಳು ಇನ್ನೂ ಇರುವುದರಿಂದ ಇವು ಅಪ್ರಸ್ತುತವೆನಿಸುತ್ತವೆ. ಇವುಗಳನ್ನು ಹೋಗಲಾಡಿಸಬೇಕು.

೫. ಈ ಸಮುದಾಯಗಳ ಶೈಕ್ಷಣಿಕಮಟ್ಟ ಇತರ ಕೆಲವು ಸಮುದಾಯಗಳ ಶೈಕ್ಷಣಿಕಮಟ್ಟಕ್ಕಿಂತ, ಹಾಗೂ ಸಾಕ್ಷರತೆಗಿಂತ ಕಡಿಮೆ ಇರುವುದು. ಆದ್ದರಿಂದ ಇವರ ಶೈಕ್ಷಣಿಕಮಟ್ಟ ಮತ್ತು ಸಾಕ್ಷರತೆದಲ್ಲಿ ಅಭಿವೃದ್ಧಿ ಸಾಧ್ಯವಾಗಬೇಕು.

೬. ಪರಿಶಿಷ್ಟ ಪಂಗಡಕ್ಕಾಗಿ ಇರುವ ಸರ್ಕಾರಿ ಯೋಜನೆಗಳು ಈ ಸಮುದಾಯಗಳಲ್ಲಿಯೇ ಬಡವರಿಗೆ ಮುಟ್ಟುತ್ತಿಲ್ಲ. ಅವುಗಳು ಮುಟ್ಟುವಂತಾಗಬೇಕು.

# ಅನುಬಂಧ

ಪರಮಾರ್ಶನ ಗ್ರಂಥಗಳು

ಕೋಷ್ಟಕಗಳು

ತಿಳುವಳಿಕೆದಾರರ ಮಾಹಿತಿ

ಛಾಯಾಚಿತ್ರಗಳು

# ಪರಾಮರ್ಶನ ಗ್ರಂಥಗಳು

೦೧. ಅಂಬಳಿಕೆ ಹಿರಿಯಣ್ಣ., ಮಲೆನಾಡ ಒಕ್ಕಲಿಗ ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ೧೯೯೯

೦೨. ಕಾಳೇಗೌಡ ನಾಗವಾರ ಎನ್. ಹುಚ್ಚಪ್ಪ. (ಸಂ), ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು: ೨೦೦೦

೦೩. ಕುಮಾರರ ಕಕ್ಕಯ್ಯ ಪೋಳ., ಚಾತುರ್ವರ್ಣ ಧರ್ಮದರ್ಶನ, ತ್ವರಿತ ಮುದ್ರಣಾಲಯ, ಗದಗ: ೨೦೦೬

೦೪. ಕಮಲೇಶ ಕೆ.ಆರ್. (ಸಂ), ದೇಜಗೌ (ಪ್ರ.ಸಂ) ರಾಜಕೀಯ ಚಿಂತನೆ , ನಿಜಲಿಂಗಪ್ಪ ಪ್ರತಿಷ್ಠಾನ, ಬೆಂಗಳೂರು: ೨೦೦೩

೦೫. ಡೋಮನಿಕ್.ಡಿ., ಜಾಗತೀಕರಣ ಐಡಿಯಾಲಜಿ ಮತ್ತು ಮಾನವ ಹಕ್ಕುಗಳು, ಸಖಿ ಪ್ರಕಾಶನ, ಹೊಸಪೇಟೆ: ೨೦೦೭

೦೬. ಕೇಶವನ್ ಪ್ರಸಾದ್.ಕೆ., ಬುಡಕಟ್ಟು ವಿಸ್ಮಯ, ಅಭಿರುಚಿ ಪ್ರಕಾಶನ, ಮೈಸೂರು: ೨೦೦೫

೦೭. ಗಂಗಾಧರ ದೈವಜ್ಞ, ಬುಡಕಟ್ಟು ಸಮಾಜ : ಹುಟ್ಟು ಸಾವಿನ ನಡುವೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೦

೦೮. ಚಂದ್ರಪ್ಪ ಎನ್., ಭಗವಾನ್ ಬಿರ್ಸಾ ಮುಂಡ, ಮುಂಡ ಪ್ರಕಾಶನ, ಬೆಂಗಳೂರು: ೨೦೦೦

೦೯. ಜಿ.ವಿ.ಡಿ., ಈಡಿಗರ ವಿವಾಹ ಪದ್ಧತಿ, ತೇಜಶ್ವನಿ ಪ್ರಕಾಶನ, ತುಮಕೂರು: ೧೯೮೩

೧೦. ತಪಸ್ವಿಕುಮಾರ.ನಂ., ಸಂಸ್ಕೃತಿ ವಿಕಾಸ, ಚೇತನ ಬುಕ್‌ಹೌಸ್, ಮೈಸೂರು: ೨೦೦೦

೧೧. ದೇವಿಪ್ರಸಾದ್ ಚಟ್ಟೋಪಾಧ್ಯಾಯ ಸಂ ರಾಮಕೃಷ್ಣ.ಜಿ (ಅನು), ಭಾರತ ದರ್ಶನ, ನವಕರ್ನಾಟಕ ಪ್ರಕಾಶನ, ಬೆಂಗಳೂರು: ೧೯೯೫

೧೨. ದೇವಿಪ್ರಸಾದ್ ಚಟ್ಟೋಪಾಧ್ಯಾಯ ಸಂ ರಾಮಕೃಷ್ಣ.ಜಿ (ಅನು), ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪ್ರಕಾಶನ, ಬೆಂಗಳೂರು : ೧೯೯೭

೧೩. ನಂಜಮ್ಮಣ್ಣಿ. ಎಂ., ಭಾರತೀಯ ಸಾಮಾಜಿಕ ಸಂಸ್ಥೆಗಳು, ನಿರ್ದೇಶಕರು, ಮೈಸೂರು ವಿಶ್ವವಿದ್ಯಾಲಯ, ಮೈಸೂರು: ೨೦೦೩

೧೪. ನಾಗಭೂಷಣ. ಟಿ. ಎಸ್., ಲೋಹಿಯಾ ಸಮಾಜವಾದದ ದರ್ಶನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು: ೨೦೦೪

೧೫. ನಾಗೇಶ್.ಎಚ್.ವಿ., ಸಾಮಾಜಿಕ ಚಳುವಳಿಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ: ೧೯೯೯

೧೬. ನಾಗೇಶಗೌಡ. ಎಚ್. ಎಲ್., ವೆರಿಯರ್ ಎಲ್ವಿನ್‌ರ ಗಿರಿಜನ ಪ್ರಪಂಚ, ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು: ೨೦೦೪

೧೭. ಪುಟ್ಟಯ್ಯ.ಬಿ.ಎಂ., ಧರ್ಮಾಮೃತ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೮

೧೮. ಪುಟ್ಟಯ್ಯ.ಬಿ.ಎಂ., ದಲಿತರು ಮತ್ತು ಭೂಮಿಯ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೮

೧೯. ಪ್ರಭಾಕರ್. ಎ. ಎಸ್., ಬುಡಕಟ್ಟು ಅಭಿವೃದ್ಧಿ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೪

೨೦. ಪ್ರಭಾಕರ್.ಎ.ಎಸ್., ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೨

೨೧. ಪ್ರಭಾಕರ್. ಎ. ಎಸ್., ಆದಿವಾಸಿ ಅಖ್ಯಾನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ: ೨೦೦೬

೨೨. ಭಟ್ಟ. ಎಲ್. ಜಿ., ಹಸಲರು, ಐ.ಬಿ.ಎಚ್.ಪ್ರಕಾಶನ, ಗಾಂಧಿನಗರ, ಬೆಂಗಳೂರು: ೧೯೮೮

೨೩. ಭಟ್ಟ. ಎಲ್. ಜಿ., ಹಸಲರು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು: ೧೯೯೩

೨೪. ಭಗವಾನ್ ಶರಣ ಉಪಾಧ್ಯಾಯ., ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು: ೨೦೦೪

೨೫. ಬೋರಲಿಂಗಯ್ಯ. ಹಿ. ಚಿ., ಗಿರಿಜನರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೧೯೯೪

೨೬. ಬೋರಲಿಂಗಯ್ಯ. ಹಿ. ಚಿ., ಮಂಟೆಸ್ವಾಮಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೧೯೯೬

೨೭. ಬೋರಲಿಂಗಯ್ಯ. ಹಿ. ಚಿ., ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೦

೨೮. ಬೋರಲಿಂಗಯ್ಯ. ಹಿ. ಚಿ., ಕಾಡು ಕಾಂಕ್ರಿಟ್ ಮತ್ತು ಜಾನಪದ, ಅಕ್ಷರ ಪ್ರಕಾಶನ, ಹೆಗ್ಗೋಡ್, ಸಾಗರ: ೧೯೯೫

೨೯. ಬೋರಲಿಂಗಯ್ಯ. ಹಿ. ಚಿ., ಗಿರಿಜನ ನಾಡಿಗೆ ಪಯಣ, ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು: ೧೯೯೧

೩೦. ಬೋರಲಿಂಗಯ್ಯ. ಹಿ. ಚಿ., ವಿಸ್ಮೃತಿ ಮತ್ತು ಸಂಸ್ಕೃತಿ, ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು: ೨೦೦೧

೩೧. ಬೋರಲಿಂಗಯ್ಯ. ಹಿ. ಚಿ., ಹುಚ್ಚಪ್ಪ ಮಾಸ್ತರ.ಎನ್, ಕಾಗೋಡು ಚಳುವಳಿ ಸುವರ್ಣ ಸಂಪುಟ, ವಿನಾಯಕ್ ಪ್ರಿಂಟರ್ಸ್, ಬೆಂಗಳೂರು: ೨೦೦೨

೩೨. ಮಂಜುನಾಥ ಬೇವಿನಕಟ್ಟಿ., ಅದಿವಾಸಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೬

೩೩. ಮೊಗಳ್ಳಿ ಗಣೇಶ್., ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೧೯೯೯

೩೪. ಮೇತ್ರಿ. ಕೆ. ಎಂ., ಬುಡಕಟ್ಟು ಕುಲಕಸಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೨

೩೫. ಮೋಹನ್‌ಕೃಷ್ಣ ರೈ.ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೪

೩೬. ಮೋಹನ್‌ಕೃಷ್ಣ ರೈ.ಕೆ., (ಸಂ), ಪರಿಸರ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: ೨೦೦೨

೩೭. ಲಕ್ಕಪ್ಪಗೌಡ.ಎಚ್.ಜೆ., (ಸಂ), ಕರ್ನಾಟಕದ ಬುಡಕಟ್ಟು ಸಂಪುಟ-೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು: ೧೯೯೪

೩೮. ಶಂಕರ ನಾರಾಯಣ ಎಸ್.ಪಿ., ಸ್ವಾತಂತ್ರ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು : ೨೦೦೩

೩೯. ಸುಬ್ರಮಣ್ಯ.ಜಿ., ಭಾರತೀಯ ಸಮಾಜ, ಸ್ವಪ್ನ ಬುಕ್‌ಹೌಸ್, ಬೆಂಗಳೂರು: ೨೦೦೬

೪೦. ಶಂಕರರಾವ್.ಚ.ನ., ಭಾರತೀಯ ಸಮಾಜಶಾಸ್ತ್ರ ಚಿಂತನೆ, ಸಿದ್ಧಲಿಂಗೇಶ್ವರ ಬುಕ್‌ಹೌಸ್, ಗುಲಬರ್ಗಾ: ೨೦೦೩

೪೧. ಹುಚ್ಚಪ್ಪ ಮಾಸ್ತರ್ ಎನ್., ಕಾಳೇಗೌಡ ನಾಗವಾರ, ಗಿರಿಜನ ಸಂಸ್ಕೃತಿ, ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ: ೨೦೦೦

**ಇಂಗ್ಲಿಷ್ ಗ್ರಂಥಗಳು**

1. Abbe.J. Dubais, Hindu maneras, Custums and cermonies, Oxford at thee calarendon press.

2. Iyer L.K.A. The Mysore Trbies and castes, Mysore Govt press, 1978

3. Enthoven R.E.the Tribes and Castes of Bombay, Vol-II, Asian Education on Service New Delhi, 1992

4. Nanjundayya H.V. Iyer The Mysore Tribes and Caste V-II, Mysore Govt Press- 1928

5. Singh K.S. People of India, Nation seeris V-XXVI Part-2, The Seheduled Tribes, Neilobrin Oford University Press-2003

6. Srinivas M.N., Social changs in modern India, Allied Publication Bombay - 1966

7. Srinivas, M.N., Collected Essaya, Oxford University Press, New Delhi- 1986

## ಪ್ರಬಂಧಗಳು

೧. ಕೆ. ಪನ್ನಂಗಧರ: ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ: ಪಿಎಚ್.ಡಿ. ಮಹಾಪ್ರಬಂಧ, ೨೦೦೪.

೨. ಕೋಂತವ್ ಸತೀಶ್: ಸಂತೆ ಮತ್ತು ಬುಡಕಟ್ಟು ಸಮುದಾಯ (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ) ಎಂ.ಫಿಲ್. ಪ್ರಬಂಧ.

೩. ಜಗದೀಶ್ ಕುಮಾರ: ಬೇಡ ಬುಡಕಟ್ಟಿನ ಬೇಟೆ ಆಚರಣೆ: ಎಂ.ಫಿಲ್. ಪ್ರಬಂಧ, ೨೦೦೪.

೪. ವಿಜಯಲಕ್ಷ್ಮೀ ಆರ್.: ಹಾಲಕ್ಕಿ ಒಕ್ಕಲಿಗ ಮಹಿಳೆ (ಸಾಮಾಜಿಕ, ಆರ್ಥಿಕ ಸ್ಥಿತಿಗತಿ ಅಧ್ಯಯನ): ಪಿಎಚ್.ಡಿ. ಮಹಾಪ್ರಬಂಧ, ೨೦೦೮.

ಕೋಷ್ಟಕ-1

ಅಂಕಿ ಅಂಶಗಳು -1 ಸುರುಪುರ ತಾಲೂಕಿನ ಆಯ್ದುಕೊಂಡ ಬೇಡಬುಡಕಟ್ಟಿನವರ ನಗರವಾರು ಗ್ರಾಮವಾರು ಕುಟುಂಬ, ಲಿಂಗವಾರು, ಜನಸಂಖ್ಯೆ ಮತ್ತು ವಯೋಗುಂಪು

| ಕ್ರ.ಸಂ. | ತಾಲೂಕು | ನೆಲೆಗಳು | ಕುಟುಂಬ | ಜನಸಂಖ್ಯೆ | | | ವಯೋಗುಂಪು | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | | | ಗಂಡು | ಹೆಣ್ಣು | ಒಟ್ಟು | 0–5 | | | 6–17 | | | 18–40 | | | 40–60 | | | 61ಮೇಲ್ಪಟ್ಟು | | |
| | | | | | | | ಗಂ | ಹೆ. | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ. | ಒಟ್ಟು |
| 1 | ಸುರುಪುರ ಗುಲ್ಬರ್ಗಾ | ಸುರಪುರ | 39 | 129 | 121 | 250 | 17 | 16 | 33 | 26 | 40 | 76 | 56 | 48 | 104 | 14 | 11 | 25 | 2 | 1 | 3 |
| 2 | | ಕೊಡೇಕಲ್ | 13 | 56 | 64 | 120 | 10 | 20 | 30 | 12 | 14 | 26 | 25 | 24 | 49 | 3 | 3 | 6 | | | |
| 3 | | ಕಕ್ಕೇರಾ | 15 | 56 | 37 | 93 | 4 | 13 | 17 | 16 | 8 | 24 | 18 | 15 | 33 | 10 | 11 | 21 | 3 | – | 3 |
| 4 | | ಹುಣಸಗಿ | 14 | 57 | 45 | 102 | 5 | 5 | 10 | 22 | 14 | 36 | 21 | 20 | 41 | 10 | 5 | 15 | – | – | – |
| 5 | | ಕೆಂಬಾವಿ | 19 | 59 | 52 | 111 | 12 | 5 | 17 | 17 | 8 | 25 | 20 | 25 | 45 | 6 | 7 | 13 | 2 | 2 | 4 |
| | ಒಟ್ಟು | | 100 | 347 | 319 | 676 | 48 | 59 | 107 | 103 | 84 | 187 | 140 | 132 | 272 | 43 | 37 | 80 | 7 | 3 | 10 |

| ನೆಲೆಗಳು | ಕುಟುಂಬ | ಪಶು ಸಂಪತ್ತು | | | | | | ಮನೆಗಳ ಮಾದರಿ | | | | | | | ನಿವೇಶನ | | ಮನೆ | | ಸೌಲಭ್ಯಗಳು | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಎತ್ತು | ಆಕಳು | ಎಮ್ಮೆ | ಕೋಳಿ | ಕುರಿ | ಆಡು | ಗುಡಾರ | ಗುಡಿಸಲು | ಹಂಚಿನ | ಜನತಾ | ಬಾಡಿಗೆ | Rcc | ಮಾಳಿಗೆ | ಸ್ವಂತದ್ದು | ಸರ್ಕಾರದ್ದು | ಸರ್ಕಾರದ್ದು | ಸ್ವಂತದ್ದು | ಪಡಿತರ ಚೀಟಿ | ವಿದ್ಯುತ್ | ಸೈಕಲ್ | ಟೇಪ್ | ಟಿ. |
| ರಪುರ | 39 | 6 | 6 | – | 17 | 8 | 70 | – | 5 | 10 | 4 | – | 8 | 12 | 38 | – | 36 | 4 | 34 | 36 | 6 | – | 37 |
| ಕೊಡೆಕಲ್ | 13 | 6 | 4 | 2 | 6 | – | 12 | – | – | 2 | – | 1 | 4 | 6 | 12 | – | 12 | – | 12 | 13 | 3 | – | 10 |
| ಕ್ಕೇರಾ | 15 | 16 | 8 | 11 | 50 | 40 | 20 | – | – | 1 | 3 | – | 4 | 7 | 13 | – | 10 | 3 | 15 | 10 | 1 | – | 08 |
| ಕೆಂಬಾವಿ | 19 | 6 | 7 | 4 | 8 | – | 18 | – | – | 4 | 4 | – | 4 | 7 | 19 | – | 15 | 4 | 16 | 11 | 3 | 1 | 09 |
| ಹುಣಸಗಿ | 14 | 8 | 6 | 8 | 15 | – | 12 | – | – | 2 | 5 | 1 | 1 | 5 | 14 | – | 9 | 5 | 14 | 10 | 2 | 2 | 08 |
| | 100 | 42 | 31 | 25 | 96 | 48 | 132 | – | 5 | 19 | 16 | 2 | 21 | 37 | 96 | – | 82 | 16 | 91 | 80 | 15 | 3 | 72 |

## ವೈವಾಹಿಕ ಸ್ಥಾನಮಾನ, ಸರ್ಕಾರಿ ಸೌಲಭ್ಯಗಳು

| ನೆಲೆಗಳು | ಕುಟುಂಬ | ವೈವಾಹಿಕ ಸ್ಥಾನಮಾನ | | | | | | | | | ಸರ್ಕಾರಿ ಸೌಲಭ್ಯಗಳು | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಅವಿವಾಹಿತ | | | ಮದುವೆಯಾದ | | | ವಿದುರ & ವಿದವೆಯರು | | | ಕುಟುಂಬ ಯೋಜನೆ | | | ಓಟಿನ ಕಾರ್ಡ | | | ವಿಧವಾ ವೇತನ | | | ಅಂಗವಿಕಲ | | |
| | | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು | ಗಂ | ಹೆಣ್ಣು | ಒಟ್ಟು |
| ಸುರಪುರ | 39 | 85 | 67 | 152 | 43 | 44 | 87 | 2 | 6 | 8 | – | 8 | 8 | 53 | 42 | 95 | – | 5 | 5 | – | – | – |
| ಕೊಡೇಕಲ್ | 13 | 31 | 35 | 66 | 26 | 26 | 52 | – | 3 | 3 | – | 5 | 5 | 23 | 16 | 39 | – | 3 | 3 | – | – | – |
| ಕಕ್ಕೇರಾ | 15 | 29 | 14 | 43 | 21 | 23 | 44 | 1 | 3 | 4 | – | 3 | 3 | 30 | 17 | 47 | – | 1 | 1 | – | – | – |
| ಹುಣಸಗಿ | 19 | 37 | 25 | 62 | 21 | 20 | 41 | 2 | 2 | 4 | – | 4 | 4 | 25 | 20 | 45 | – | – | – | – | – | – |
| ಕೆಂಬಾವಿ | 14 | 29 | 17 | 46 | 29 | 30 | 59 | – | 6 | 6 | – | 2 | 2 | 20 | 25 | 45 | – | 6 | 6 | – | – | – |
| | ಒಟ್ಟು | 211 | 158 | 367 | 140 | 143 | 283 | 5 | 20 | 25 | – | 22 | 22 | 151 | 120 | 171 | – | 15 | 15 | – | – | – |

ತಖ್ತೆ - 4

## ಸುರುಪುರ ತಾಲ್ಲೂಕಿನ ಆಯ್ದುಕೊಂಡ ಬೇಡ ಬುಡಕಟ್ಟಿನ ಶೈಕ್ಷಣಿಕ ಮಟ್ಟ

| ಿಲೆಗಳು | ಕುಟುಂಬ | ಶೈಕ್ಷಣಿಕ ಮಟ್ಟ | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪ್ರಾಥಮಿಕ | | | ಮಾಧ್ಯಮಿಕ | | | ಪ್ರೌಢಶಾಲೆ | | | ಡಿಪ್ಲೋಮಾ | | | ಪದವಿಪೂರ್ವ | | | ಪದವಿ | | | ಸ್ನಾತಕೋತ್ತರ | | | ಇತರ | |
| | | ಗಂ | ಹೆ. | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ, | ಒಟ್ಟು | ಗಂ | ಹೆ. | ಒಟ್ಟು | ಗಂ | ಹೆ |
| ರಪುರ | 39 | 13 | 21 | 34 | 5 | 5 | 10 | 8 | 6 | 14 | 1 | – | 1 | 14 | 4 | 18 | 4 | 3 | 7 | 1 | – | 1 | 5 | 1 |
| ಡೆಕಲ್ | 13 | 9 | 14 | 13 | 6 | 4 | 10 | 9 | 4 | 13 | | | | 7 | 2 | 9 | | | | | | | 1 | 1 |
| ಕಕ್ಕೆರಾ | 15 | 5 | 3 | 8 | 3 | 2 | 5 | 3 | 2 | 5 | – | – | | 4 | 2 | 6 | 3 | 1 | 4 | | | | | |
| ಕೆಂಬಾವಿ | 19 | 7 | 4 | 11 | 3 | 3 | 6 | 5 | 3 | 8 | 1 | – | 1 | 2 | – | 2 | 3 | – | 3 | | | | 1 | – |
| ರುಣಸಗಿ | 14 | 7 | 5 | 12 | 4 | 2 | 6 | 6 | – | 6 | | | | 2 | 1 | 3 | | | | | | | | |
| ಒಟ್ಟು | 100 | 41 | 47 | 78 | 21 | 16 | 37 | 31 | 15 | 46 | 2 | – | 2 | 29 | 9 | 38 | 10 | 4 | 14 | 1 | – | 1 | 6 | 2 |

ವೃತ್ತಿಗಳು.

ಕೋಷ್ಟಕ – 5

| ಲೆಳು | ಕುಟುಂಬ | ಕಸುಬುಗಳು | | | | | | | | | | | | | | | ಸಣ್ಣವ್ಯಾಪಾರಿಗಳು | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕೃಷಿ | | | ಕೃಷಿಕೂಲಿ | | | ದಿನಗಳು | | | ಮನೆಗೆಲಸ | | | ತರಕಾರಿವ್ಯಾಪರ | | | ಹಣ್ಣಿನ ವ್ಯಾಪಾರ | | | | | | ಬಡಿಗತನ | | | ಇತರೆ | | |
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ರ ಪರ | 39 | 8 | 5 | 13 | 7 | 12 | 19 | 20 | 15 | 35 | – | 10 | 10 | 6 | 12 | 18 | 6 | 13 | 19 | 2 | 3 | 5 | – | – | – | 13 | 6 | 19 |
| ಡಿತೆ ೇಲ್ | 13 | 6 | 5 | 13 | 13 | 11 | 24 | 11 | 10 | 21 | – | 6 | 6 | – | 3 | 3 | – | 2 | 2 | – | – | – | – | – | – | 5 | 2 | 7 |
| ಕ್ಕೇರಿ | 15 | 9 | 7 | 16 | 15 | 13 | 28 | 10 | 14 | 24 | – | 3 | 3 | | | | | | | | | | | | | 6 | – | 6 |
| ಬ ಬಿ | 19 | 5 | 4 | 9 | 18 | 10 | 28 | 13 | 10 | 23 | – | 4 | 4 | | | | | | | | | | | | | 6 | 3 | 9 |
| ಟಣ ಗಿ | 14 | 10 | 7 | 17 | 15 | 12 | 27 | 12 | 9 | 21 | – | 5 | 5 | | | | | | | | | | | | | 10 | 3 | 13 |
| ಒಟ್ಟು | 100 | 36 | 31 | 67 | 86 | 68 | 158 | 66 | 58 | 124 | – | 28 | 28 | 6 | 15 | 21 | 6 | 15 | 21 | 2 | 3 | 5 | | | | 40 | 14 | 54 |

7

116

ಬೇಡರು

| ಭೂಹಿಡುವಳಿಗಳು (ಎಕರೆಗಳಲು) | | | | | | | | |
|---|---|---|---|---|---|---|---|---|
| ನೆಲೆಗಳು | ಕುಟುಂಬ | 0–2 ಎಕರೆ | 2ಕ್ಕೂ ಹೆಚ್ಚು 4ಕ್ಕೂ ಕಡಿಮೆ | 4ಕ್ಕೂ ಹೆಚ್ಚು 6ಕ್ಕೂ ಕಡಿಮೆ | 6ಕ್ಕೂ ಹೆಚ್ಚು 15ಕ್ಕೂ ಕಡಿಮೆ | 10ಕ್ಕೂ ಹೆಚ್ಚು 15ಕ್ಕೂ ಕಡಿಮೆ | 15ಕ್ಕೂ ಹೆಚ್ಚ 20ಕ್ಕೂ ಕಡಿಮೆ | 20ಕ್ಕೂ ಹೆಚ್ಚು |
| ಸುರಪುರ | 39 | 4 | 4 | 1 | – | – | 1 | 0 |
| ಕೊಡೇಕಲ್ | 13 | 1 | 2 | – | 1 | – | 1 | 3 |
| ಕಕ್ಕೇರಾ | 15 | 6 | 4 | 1 | 3 | – | – | – |
| ಹುಣಸಗಿ | 14 | 3 | – | 1 | 4 | 1 | – | – |
| ಕೆಂಬಾವಿ | 19 | – | – | – | 1 | – | – | – |
| | 100 | 14 | 10 | 3 | 9 | 1 | 2 | 3 |

ಸುರಪುರ ತಾಲೂಕಿನಲ್ಲಿ ಆಯ್ದುಕೊಂಡ ಮೇದ ಬುಡಕಟ್ಟಿನವರ ಗ್ರಾಮವಾರು, ನಗರವಾರು ಕುಟುಂಬ, ಲಿಂಗವಾರು, ಜನಸಂಖ್ಯೆ ಮತ್ತು ವಯೋಗುಂಪು.

| ತಾಲೂಕು ನೆಲೆಗಳು | ಕುಟುಂಬ | | | | ವಯೋಗುಂಪು | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| | | | | | 0–5 | | | 6–17 | | | 18–40 | | | 40–60 | | | 61ಮೇಲ್ಪಟ್ಟು | | |
| | | ಗಂ. | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ. | ಹೆ | ಒಟ್ಟು |
| ಸುರಪುರ | 72 | 228 | 259 | 487 | 25 | 18 | 43 | 44 | 42 | 86 | 115 | 91 | 206 | 36 | 36 | 72 | 8 | 4 | 12 |
| ಹುಣಸಗಿ | 10 | 30 | 24 | 54 | 4 | 1 | 5 | 10 | 6 | 16 | 15 | 12 | 27 | – | 3 | 3 | 1 | 1 | 2 |
| ಕೆಂಬಾವಿ | 11 | 30 | 30 | 60 | 5 | 2 | 7 | 9 | 10 | 19 | 12 | 15 | 27 | 3 | 2 | 5 | 1 | 1 | 2 |
| ಕಕ್ಕೇರಾ | 3 | 7 | 6 | 13 | – | – | – | 3 | 2 | 5 | 2 | 3 | 5 | 2 | 1 | 3 | – | – | – |
| ಕೊಡೇಕಲ್ | 4 | 15 | 10 | 25 | 3 | – | 3 | 6 | 4 | 10 | 4 | 4 | 8 | 2 | – | 2 | – | 1 | – |
| ಒಟ್ಟು | 100 | 380 | 329 | 639 | 37 | 21 | 58 | 69 | 54 | 136 | 208 | 125 | 273 | 43 | 42 | 85 | 10 | 7 | 16 |

ಕೋಷ್ಟಕ – ೮

| ನೆಲೆಗಳು | ಕುಟುಂಬ | ಪಶು ಸಂಪತ್ತು | | | | | ಮನೆಗಳ ಮಾದರಿ | | | | | | ನಿವೇಶನ | | ಮನೆ | | ಸೌಲಭ್ಯಗಳು | | | |
|---|---|---|---|---|---|---|---|---|---|---|---|---|---|---|---|---|---|---|---|---|
| | | ಆಡು | ಕುರಿ | ಆಕಳು | ಎಮ್ಮೆ | ಕೋಳಿ | ಮಾಳಿಗೆ | ಗುಡಿಸಲು | Tin ಹೌಸ್ | ಜನತಾ | Rcc | ಬಾಡಿಗೆ | ಸ್ವಂತದ್ದು | ಸರ್ಕಾರದ್ದು | ಸರ್ಕಾರದ್ದು | ಸ್ವಂತದ್ದು | ಪಡಿತರ ಚೀಟಿ | ವಿದ್ಯುತ್ | ಸೈಕಲ್ | ಟೇಪ್ |
| ಸುರಪುರ | 72 | 8 | 3 | 1 | – | 8 | 23 | 6 | 9 | 16 | 12 | 6 | 50 | – | 66 | 6 | 71 | 69 | 32 | 4 |
| ಹುಣಸಗಿ | 10 | 2 | 2 | – | – | 3 | 3 | 1 | 2 | – | 3 | 1 | 10 | – | 10 | – | 6 | 10 | 2 | – |
| ಕೆಂಬಾವಿ | 11 | 3 | 1 | 1 | – | 2 | 5 | 3 | 2 | 2 | 1 | – | 11 | – | 9 | 2 | 11 | 9 | 4 | 1 |
| ಕಕ್ಕೇರಾ | 3 | – | 4 | – | – | – | – | – | 1 | – | – | 2 | 2 | – | 1 | – | 3 | 3 | – | – |
| ಕೊಡೆಕಲ್ | 4 | – | – | – | – | – | – | – | – | – | 2 | 2 | 4 | – | 2 | – | 4 | 4 | – | – |
| | 100 | 13 | 10 | 2 | – | 13 | 31 | 10 | 14 | 18 | 18 | 11 | 77 | – | 88 | 8 | 95 | 95 | 38 | 5 |

ಸುರಪುರ ತಾಲೂಕಿನ ಅಯ್ದುಕೊಂಡ ಮೇದ ಬುಡಕಟ್ಟಿನಗ್ರಾಮವಾರು, ಕುಟುಂಬವಾರು, ಲಿಂಗವಾರು ವೈವಾಹಿಕ ಸ್ಥಾನಮಾನಸರ್ಕಾರಿ ಸೌಲಭ್ಯಗಳು

| ನೆಲೆಗಳು | ಕುಟುಂಬ | ವೈವಾಹಿಕಸ್ಥಾನಮಾನ | | | | | | | | | ಸರ್ಕಾರಿ ಸೌಲಭ್ಯಗಳು | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಆವಿವಾಹಿತ | | | ಮದುವೆಯಾದ | | | ವಿದುರ& ವಿಧವೆಯರು | | | ಕುಟುಂಬ ಯೋಜನೆ | | | ಓಟಿನಕಾರ್ಡ | | | ವಿಧವಾವೇತನ | | | ಅಂಗವಿಕಲರು | | |
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ಸುರಪುರ | 72 | 135 | 84 | 219 | 84 | 86 | 170 | 4 | 16 | 20 | – | 11 | 11 | 127 | 110 | 237 | – | 6 | 6 | – | 1 | 1 |
| ಹುಣಸಗಿ | 10 | 16 | 8 | 24 | 8 | 8 | 16 | – | 2 | 2 | – | 1 | 1 | 14 | 11 | 25 | – | 1 | 1 | – | – | – |
| ಕೆಂಬಾವಿ | 11 | 18 | 8 | 26 | 13 | 13 | 26 | – | 7 | 7 | – | – | – | 12 | 13 | 25 | – | 3 | 3 | – | – | – |
| ಕಕ್ಕೇರಾ | 3 | 2 | 7 | 9 | 3 | 3 | 6 | – | – | – | – | – | – | 4 | 4 | 8 | – | – | – | – | – | – |
| ಕೊಡೇಕಲ್ | 4 | 8 | 4 | 12 | 4 | 4 | 8 | – | 1 | 1 | – | – | – | 6 | 4 | 10 | – | – | – | – | – | |
| ಒಟ್ಟು | 100 | 179 | 111 | 290 | 112 | 114 | 226 | 4 | 26 | 30 | – | 12 | 12 | 163 | 142 | 305 | – | 10 | 10 | – | 1 | 1 |

| ನೆಲೆಗಳು | ಕುಟುಂಬ | ಕಸುಬುಗಳು | | | | | | | | | | | | ಸಣ್ಣವ್ಯಾಪಾರಗಳು | | | | | | | | | | | | ಇತರೆ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಕುಲಕಸುಬು | | | ಕೃಷಿಕೂಲಿ | | | ದಿನಗೂಲಿ | | | ಮನೆಗೆಲಸ | | | ತರಕಾರಿ ವ್ಯಾಪಾರ | | | ಹಣ್ಣಿನ ವ್ಯಾಪಾರ | | | ಮನೆ ಕಟ್ಟುವ ಕೆಲಸ | | | ಬಡಿಗತನ | | | | | |
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು |
| ಸುರಪುರ | 72 | 19 | 14 | 33 | 2 | 4 | 6 | 17 | 9 | 26 | – | 10 | 10 | 13 | 18 | 31 | 18 | 14 | 32 | 30 | 20 | 50 | 20 | – | 20 | 40 | 18 | 58 |
| ಹುಣಸಗಿ | 10 | 3 | 2 | 5 | – | – | – | – | – | – | – | 3 | 3 | 2 | 4 | 6 | 5 | 6 | 11 | – | – | – | – | – | – | 2 | 1 | 3 |
| ಕೆಂಭಾವಿ | 11 | 5 | – | 5 | – | – | – | – | 2 | 2 | – | 5 | 5 | 4 | 6 | 10 | 5 | 8 | 13 | – | – | – | – | – | – | 3 | – | 3 |
| ಕಕ್ಕೇರಾ | 03 | 2 | – | 2 | – | 2 | 2 | – | – | – | – | 1 | 1 | 1 | – | 1 | – | – | – | – | – | – | – | – | – | – | – | – |
| ಕೊಡೆಕಲ್ | 04 | 3 | – | 3 | – | – | – | – | – | – | – | 2 | 2 | – | 2 | 2 | 1 | 2 | 3 | – | – | – | – | – | – | – | – | – |
| ಒಟ್ಟು | 100 | 32 | 16 | 48 | 2 | 6 | 8 | 17 | 11 | 28 | – | 21 | 21 | 20 | 30 | 50 | 29 | 30 | 59 | 30 | 20 | 50 | 20 | – | 20 | 45 | 19 | 64 |

ಸುರುಪುರ ತಾಲೂಕಿನ ಆಯ್ದುಕೊಂಡ ಮೇದಬುಡಕಟ್ಟಿನ ಶೈಕ್ಷಣಿಕ ಮಟ್ಟ

| ನೆಲೆಗಳು | ಕುಟುಂಬ | ಶೈಕ್ಷಣಿಕ ಮಟ್ಟ | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪ್ರಾಥಮಿಕ | | | ಮಾಧ್ಯಮಿಕ | | | ಪ್ರೌಢಶಾಲೆ | | | ಡಿಪ್ಲೋಮ | | | ಪದವಿಪೂರ್ವ | | | ಪದವಿ | | | ಸ್ನಾತಕೋತ್ತರ | | | ಇತರೆ | | |
| | | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ. | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ | ಹೆ | ಒಟ್ಟು | ಗಂ. | ಹೆ | ಒಟ್ಟು |
| ಸುರಪುರ | 72 | 22 | 26 | 48 | 23 | 24 | 47 | 48 | 29 | 77 | 2 | – | 2 | 22 | 19 | 41 | 23 | 8 | 31ʻ | 4 | – | 4 | 4 | 3 | 7 |
| ...ಣಸಗಿ | 10 | 5 | 4 | 9 | 4 | 5 | 9 | 4 | 3 | 7 | – | – | – | – | – | – | – | – | – | – | – | – | – | – | – |
| ...ಬಾವಿ | 11 | 6 | 6 | 12 | 7 | 6 | 13 | 8 | 4 | 12 | – | – | – | 4 | 2 | 6 | 4 | 2 | 6 | – | – | – | – | – | – |
| ...ಕ್ಕೇರಾ | 3 | 1 | 1 | 2 | 1 | – | 1 | – | 1 | 1 | – | – | – | – | – | – | – | – | – | – | – | – | – | – | – |
| ...ಡೇಕಲ್ | 4 | 3 | 1 | 4 | 1 | 1 | 2 | 1 | – | 2 | – | – | – | – | – | – | – | – | – | – | – | – | – | – | – |
| ...ಟ್ಟು | 100 | 47 | 38 | 85 | 36 | 36 | 72 | 61 | 37 | 98 | 2 | – | 2 | 26 | 21 | 47 | 27 | 10 | 37 | 4 | – | 4 | 4 | 3 | 7 |

# ಮೇದ ತಿಳುವಳಿಕೆದಾರರ ಮಾಹಿತಿ

| ಕ್ರ.ಸಂ. | ಹೆಸರು | ವಯಸ್ಸು | ಸ್ಥಳದ ಹೆಸರು | ವೃತ್ತಿ |
|---|---|---|---|---|
| ೧. | ವೆಂಕಟೇಶ್ ಕೆ. ಗುಡಿಮನಿ | ೫೫ | ಸುರಪುರ | ಮುಖ್ಯಶಿಕ್ಷಕರು |
| ೨. | ಭೀಮನಗೌಡ | ೬೫ | ಸುರಪುರ | ಕುಲಕಸುಬು |
| ೩. | ರೇಣುಕಾ ಕಳ್ಳಿಮನಿ | ೨೫ | ಸುರಪುರ | ಕುಲಕಸುಬು |
| ೪. | ನಾಗಪ್ಪ ಗೋನಾಲ್ | ೩೬ | ಸುರಪುರ | ಶಿಕ್ಷಣ ಸಂಯೋಜಕರು |
| ೫. | ಪದ್ಮಾವತಿ | ೪೫ | ಸುರಪುರ | ಹಣ್ಣಿನ ವ್ಯಾಪಾರ |
| ೬. | ನಿಜಪ್ಪ | ೨೨ | ಸುರಪುರ | ಗೌಂಡಿ |
| ೭. | ವೆಂಕಟೇಶ್ | ೨೬ | ಹುಣಸಗಿ | ಆಟೋಚಾಲಕ |
| ೮. | ಹಣಮಂತ | ೪೫ | ಹುಣಸಗಿ | ಹಣ್ಣಿನ ವ್ಯಾಪಾರ |
| ೯. | ದುರ್ಗಮ್ಮ | ೩೫ | ಹುಣಸಗಿ | ಹಣ್ಣಿನ ವ್ಯಾಪಾರ |
| ೧೦. | ರೇಣುಕಮ್ಮ | ೨೮ | ಹುಣಸಗಿ | ಬಿದಿರು ವ್ಯಾಪಾರ |
| ೧೧. | ಗಂಗಮ್ಮ ಚಂದ್ರಪ್ಪ | ೪೫ | ಕೆಂಬಾವಿ | ಹಣ್ಣಿನ ವ್ಯಾಪಾರ |
| ೧೨. | ಭೀಮರಾಯ | ೫೦ | ಕೆಂಬಾವಿ | ಕೂಲಿ |
| ೧೩. | ಗಾಲೆಪ್ಪ | ೬೫ | ಕೆಂಬಾವಿ | ಬಿದಿರು ವ್ಯಾಪಾರ |
| ೧೪. | ಯಂಕಮ್ಮ | ೪೦ | ಕೆಂಬಾವಿ | ಹಣ್ಣಿನ ವ್ಯಾಪಾರ |
| ೧೫. | ರಾಘಪ್ಪ | ೨೫ | ಕೊಡೆಕಲ್ | ಡ್ರೈವರ್ |

## ಬೇಡ ತಿಳುವಳಿಕೆದಾರರ ಮಾಹಿತಿ

| ಕ್ರ.ಸಂ. | ಹೆಸರು | ವಯಸ್ಸು | ಸ್ಥಳದ ಹೆಸರು | ವೃತ್ತಿ |
|---|---|---|---|---|
| ೧. | ಹಣುಮಂತ | ೫೦ | ಸುರಪುರ | ಕಿರಾಣಿ ಅಂಗಡಿ |
| ೨. | ಹಣಮಂತ ದೇಸಾಯಿ | ೬೦ | ಸುರಪುರ | ಗಿಡದ ಗುತ್ತಿಗೆ |
| ೩. | ದುರ್ಗಪ್ಪ | ೪೦ | ಸುರಪುರ | ಅಮಾಲಿ |
| ೪. | ಗುಂಡಮ್ಮ | ೩೫ | ಸುರಪುರ | ಕೃಷಿ ಕೂಲಿ |
| ೫. | ನಾಗಪ್ಪ | ೪೫ | ಸುರಪುರ | ಪುರಸಭೆ ಸದಸ್ಯ |
| ೬. | ಕನ್ನಪ್ಪ | ೨೮ | ಸುರಪುರ | ಕೂಲಿ |
| ೭. | ಹನುಮಂತ ಮೇಷ್ಟ್ರು | ೬೦ | ಸುರಪುರ | ನಿವೃತ್ತ ಶಿಕ್ಷಕ |
| ೮. | ಸಾಹೇಬಗೌಡ | ೬೧ | ಕೊಡೇಕಲ್ | ಕೃಷಿ |
| ೯. | ಜಯಶ್ರೀ | ೨೬ | ಕೊಡೇಕಲ್ | ಕೂಲಿ |
| ೧೦. | ಸಿದ್ದನಗೌಡ | ೪೦ | ಕೊಡೇಕಲ್ | ಸರ್ಕಾರಿ ನೌಕರ |
| ೧೧. | ಪರಮಣ್ಣ | ೬೫ | ಕಕ್ಕೇರಾ | ಒಕ್ಕಲುತನ |
| ೧೨. | ಮಹಾದೇವಿ | ೪೦ | ಕಕ್ಕೇರಾ | ಕೂಲಿ |
| ೧೩. | ಶರಣಮ್ಮ | ೫೦ | ಹುಣಸಗಿ | ಕೂಲಿ |
| ೧೪. | ನಾಗಪ್ಪ | ೪೩ | ಕೆಂಬಾವಿ | ಕೂಲಿ |
| ೧೫. | ಶಿವಮ್ಮ | ೩೫ | ಕೆಂಬಾವಿ | ಅಂಗನವಾಡಿ ಕಾರ್ಯಕರ್ತೆ |

